# ವಚನ ಪರುಷ

ಡಾ|| ಎಸ್. ವಿದ್ಯಾಶಂಕರ



ಸ್ನೇಹ ಪ್ರಕಾಶನ
ಎಲ್–3, ಜ್ಞಾನಭಾರತಿ, ಬೆಂಗಳೂರು–56.

Vachana Parusha a collection of articles on Vachana Literature, by Dr. S. Vidyashankar, Assistant Proffessor in Kannada, Bangalore University, Bangalore-560 056, Published by Sneha Prakashana, L-3, Jnanabharathi, Bangalore-56
PP. 98 + iii



**Price : 8-00**

ಮೊದಲನೇ ಮುದ್ರಣ : ೧೯೮೧

ಗ್ರಂಥಸ್ವಾಮ್ಯ :
ಡಾ|| ಎಸ್. ವಿದ್ಯಾಶಂಕರ

ಬೆಲೆ :
ಎಂಟು ರೂಪಾಯಿ



ಮುದ್ರಕರು :
ಶ್ರೀ ರೇಣುಕ ಪವರ್ ಪ್ರೆಸ್
ಓ.ಟಿ.ಸಿ. ರೋಡ್, ಬೆಂಗಳೂರು-560 053.

## ಲೇಖಕನ ಮಾತು

ವಚನ ಸಾಹಿತ್ಯಕ್ಕೆ ಸಂಬಂಧಿಸಿದಂತೆ ನಾನು ಆಗಾಗ್ಗೆ ಬರೆದ ಲೇಖನಗಳನ್ನೆಲ್ಲಾ ಒಂದೆಡೆ ಸೇರಿಸಿ ಪ್ರಕಟಿಸುವ ಉದ್ದೇಶವಿದ್ದು ಆ ದಿಶೆಯಲ್ಲಿ 'ವಚನ ಪರುಷ' ಮೊದಲ ಸಂಪುಟವಾಗಿದೆ.

ಬೇರೆ ಬೇರೆ ಸಂದರ್ಭಗಳಲ್ಲಿ ಬರೆದ ಈ ಲೇಖನಗಳನ್ನು ಓದಿ ಮೆಚ್ಚಿಗೆಯ ನುಡಿಗಳನ್ನು ಆಡಿ ನನ್ನ ಬರವಣಿಗೆಗೆ ಪ್ರೋತ್ಸಾಹವನ್ನು ಡಾ॥ ಜಿ. ಎಸ್. ಶಿವರುದ್ರಪ್ಪ, ಡಾ॥ ಎಂ. ಚಿದಾನಂದಮೂರ್ತಿ, ಡಾ॥ ಎಂ. ಎಂ. ಕಲ್ಬುರ್ಗಿ, ಡಾ॥ ಸಿದ್ದಯ್ಯ ಪುರಾಣಿಕ, ಶ್ರೀ ಹಂಪ ನಾಗರಾಜಯ್ಯ, ಶ್ರೀ ಎಸ್. ಶಿವಣ್ಣ, ಶ್ರೀ ಶಾಂತರಸ, ಶ್ರೀ ಮೊರಬದ ಮಲ್ಲಿಕಾರ್ಜುನ ಇವರೇ ಮೊದಲಾದ ಸಹೃದಯರು ನೀಡಿರುವರು. ಅದಕ್ಕಾಗಿ ಈ ಎಲ್ಲ ಮಹನೀಯರಿಗೆ ನನ್ನ ಹೃತ್ಪೂರ್ವಕವಾದ ವಂದನೆಗಳು.

'ಪರಿವರ್ತನೆಯ ತಿರುವಿನಲ್ಲಿ ವಚನಕಾರ ಉರಿಲಿಂಗಪೆದ್ದಿ' ಎಂಬ ಲೇಖನ ಬಸವ ಸಮಿತಿಯವರು ಏರ್ಪಡಿಸಿದ್ದ ವಿಚಾರ ಸಂಕಿರಣದಲ್ಲಿ ಮಂಡಿಸಿದ ಪ್ರಬಂಧ. ಈ ಲೇಖನ ಸಿದ್ಧವಾದ ಮೇಲೆ ಹರಿಜನ ಲಿಂಗವಂತರು ಮೈಸೂರು, ಮಂಡ್ಯ, ಹಾಸನ ಜಿಲ್ಲೆಗಳಲ್ಲಿ ಹೆಚ್ಚಾಗಿ ನೆಲೆಸಿರುವರೆಂಬ ಹೊಸ ವಿಷಯ ತಿಳಿಯಿತು. ಕುತೂಹಲದಿಂದ ನಾನು ಈ ಜಿಲ್ಲೆಗಳಲ್ಲಿ ಕ್ಷೇತ್ರಾಧ್ಯಯನ ನಡೆಸಿದೆ. ಸಾಮಾಜಿಕ ಅಧ್ಯಯನಕ್ಕೆ ನೆರವಾಗುವ ವಿಪುಲ ಮಾಹಿತಿ ಅಲ್ಲಿ ದೊರೆಯಿತು. ಆ ಎಲ್ಲ ಮಾಹಿತಿಗಳನ್ನು ಬಳಸಿಕೊಂಡು 'ಲಿಂಗವಂತ ಹರಿಜನ' ಎಂಬ ಲೇಖನವನ್ನು 'ಬಸವ ಪಥ' ಮಾಸಿಕದಲ್ಲಿ ಪ್ರಕಟಿಸಿದೆ. 'ಪರಿವರ್ತನೆಯ ತಿರುವಿನಲ್ಲಿ ವಚನಕಾರ ಉರಿಲಿಂಗಪೆದ್ದಿ' ಎಂಬ ಲೇಖನಕ್ಕೆ ಸಂಬಂಧಿಸಿದಂತೆ ಪೂರಕಸಾಮಗ್ರಿಗಳು 'ಲಿಂಗವಂತ ಹರಿಜನ' ಲೇಖನದಲ್ಲಿರುವುದರಿಂದ ಅದನ್ನು ಆ ಲೇಖನದ ಅನುಬಂಧವಾಗಿ ಕೊಟ್ಟಿರುವೆನು. ನನ್ನ ಕ್ಷೇತ್ರಾಧ್ಯಯನಕ್ಕೆ ನನ್ನೊಡನೆ ಬಂದು ನನ್ನ ಆ ಕೆಲಸದಲ್ಲಿ ಬಹಳಷ್ಟು ನೆರವನ್ನು ನನ್ನ ತೀರ್ಥರೂಪರಾದ ಶ್ರೀ ಹ.ಜ. ಶಿವಶಂಕರಪ್ಪನವರು ನೀಡಿರುವರು. ಅದಕ್ಕಾಗಿ ಅವರಿಗೆ ನನ್ನ ಗೌರವಪೂರ್ವಕ ಪ್ರಣಾಮಗಳು.

ಈ ಪುಸ್ತಕವನ್ನು ಚೆನ್ನಾಗಿ ತರಬೇಕೆಂದು ಬಹಳ ಶ್ರದ್ಧೆ ವಹಿಸಿ ಅಚ್ಚಿಸಿದವರು ಶ್ರೀ ರೇಣುಕ ಪವರ್ ಪ್ರೆಸ್‌ನ ಮಾಲೀಕರು ಹಾಗೂ ಕೆಲಸಗಾರರು. ಈ ವಿಶ್ವಾಸಕ್ಕಾಗಿ ಅವರಿಗೆ ನನ್ನ ಕೃತಜ್ಞತೆಗಳು.

ಕನ್ನಡ ಅಧ್ಯಯನ ಕೇಂದ್ರ — ಎಸ್. ವಿದ್ಯಾಶಂಕರ
ಬೆಂಗಳೂರು–56
22–12–1981.

# ವಚನಗಳಲ್ಲಿ ಸತಿ-ಪತಿ ಭಾವ

ಭಾರತೀಯ ಜೀವನದಲ್ಲಿ ವಿವಾಹವು ಗಂಡು–ಹೆಣ್ಣುಗಳನ್ನು ಹತ್ತಿರ ತರುವ, ಅವರ ಭವಿಷ್ಯದ ಮಂಗಳಮಯ ಬಾಳ್ವೆಗೆ ಸಾಮಾಜಿಕ ಮನ್ನಣೆ ನೀಡುವ ಕೌಟುಂಬಿಕ ಸಮಾರಂಭ. ಭಾರತೀಯರ ಬದುಕಿನಲ್ಲಿ ವಿವಾಹವು ವ್ಯಕ್ತಿಯ ಬದುಕಿನ ಮಂಗಳದ ಮುಂಬೆಳಗು. ವಿವಾಹದ ಪವಿತ್ರ ಮೈತ್ರಿಯಲ್ಲಿ ಗಂಡು–ಹೆಣ್ಣು ಕುಟುಂಬವಾಳ್ಕೆ ನಡೆಸಹೊರಡುವರು. ದೈಹಿಕ ಆಕರ್ಷಣೆ ಅವರನ್ನು ಹತ್ತಿರ ತರುತ್ತದೆ. ಪ್ರಕೃತಿದತ್ತವಾದ ದೈಹಿಕ ಸುಖದ ಸೂರೆಯಲ್ಲಿ ಮೈ–ಮನಗಳು ಪರಸ್ಪರ ಅರ್ಪಿಸಿಕೊಳ್ಳುತ್ತವೆ. ಗಂಡು–ಹೆಣ್ಣುಗಳ ಈ ಪೂರ್ಣಸಮರ್ಪಣಭಾವ ಅವರನ್ನು ಅವರ ಮನಸ್ಸನ್ನು ಇನ್ನೂ ಹತ್ತಿರ ತರುತ್ತದೆ; ಪರಸ್ಪರ ವಿಶ್ವಾಸವನ್ನು ಬೆಳೆಸುತ್ತದೆ ; ಭಾವ ಮೈತ್ರಿಯನ್ನುಂಟುಮಾಡುತ್ತದೆ. ಪರಸ್ಪರ ಅರಿಯುವುದು ಸಮರಸ ಜೀವನಕ್ಕೆ ಮೊದಲ ಮೆಟ್ಟಿಲಾದರೆ, ಪರಸ್ಪರ ನಂಬಿಕೆ ಎರಡನೆಯ ಮೆಟ್ಟಲು, ಒಬ್ಬರು ಮತ್ತೊಬ್ಬರಲ್ಲಿ ತೋರುವ ನಿಷ್ಠೆ ಮೂರನೆಯ ಮೆಟ್ಟಿಲು. ಸತಿ–ಪತಿಗಳ ಕೌಟುಂಬಿಕ ಸಂಬಂಧವು ಭಾವನಾಪ್ರಧಾನವಾದುದಾದರೂ, ಅವರ ಭಾವಪ್ರಪಂಚದ ಸಂಕೀರ್ಣತೆ ಅವರ ಪರಿಶುದ್ಧ ಪ್ರೇಮದಿಂದ ಕ್ರಮಕ್ರಮವಾಗಿ ಸರಳಗೊಳ್ಳುತ್ತಾ ಹೋಗಿ ತೃಪ್ತ ಸ್ಥಿತಿಯನ್ನು ಮುಟ್ಟುತ್ತದೆ. ದಾಂಪತ್ಯಜೀವನದಲ್ಲಿನ ಹೆಣ್ಣು–ಗಂಡುಗಳ ಸಮರಸೈಕ್ಯ ಭಾವವನ್ನು ಜೀವಾತ್ಮ–ಪರಮಾತ್ಮರಿಗೂ ಅನ್ವಯಿಸುವ ಪ್ರಯತ್ನ ನಡೆದಿದೆ. ಸತಿ–ಪತಿ ಭಾವದಲ್ಲಿ ಜೀವಾತ್ಮ–ಪರಮಾತ್ಮರ ಅನುಸಂಧಾನವನ್ನು ಲೌಕಿಕ ಜಗತ್ತಿನ ಹೆಣ್ಣು–ಗಂಡುಗಳ ಸಾಮರಸ್ಯಪೂರ್ಣ ಪ್ರೇಮಾನುಸಂಧಾನದೊಂದಿಗೆ ಹೋಲಿಸಲಾಗಿದೆ. ಕನ್ನಡದಲ್ಲಿ ಈ ವಿಶಿಷ್ಟ ಪ್ರಕಾರದ ಮಧುರಭಾವವನ್ನು ವಚನಕಾರರ ವಚನಗಳಲ್ಲಿ ನಾವು ನೋಡಬಹುದು. ಶರಣನು ತನ್ನನ್ನೇ ಸತಿಯೆಂದೂ ಲಿಂಗವನ್ನು ಪತಿಯೆಂದೂ ಭಾವಿಸಿ ಲೌಕಿಕದ ನೆಲೆಯಲ್ಲಿ ಸತಿ–ಪತಿಗಳು ಪ್ರೇಮಾಭಿವ್ಯಕ್ತಿಮಾಡುವ

ರೀತಿಯಲ್ಲೇ ಭಕ್ತಿಯ ಅನುಸಂಧಾನ ಮಾಡುವನು. ಅದನ್ನೇ 'ಶರಣಸತಿ ಲಿಂಗಪತಿ' ಎಂದು ವಚನಗಳಲ್ಲಿ ಕರೆಯಲಾಗಿದೆ.

ಭಕ್ತಿಯು ದೇವ–ಜೀವರ ನಡುವಣ ಅನುಸಂದಾನದ ಮಾಧ್ಯಮ. 'ಪಶುಪತಿ' ಎಂಬ ಪದದಲ್ಲೂ ಜೀವ–ದೇವರ ಸಂಬಂಧದ ಸೂಚನೆಯಿದೆ. ಇದೇ ಪಶು ಪಾಶದಲ್ಲಿಯೂ ವ್ಯಕ್ತಗೊಂಡಿದೆ. ಭೃತ್ಯ–ಆಳ್ದ ಸಂಬಂಧವು, ಸಕಲ ಜೀವ ಜಾಲವನ್ನು ಮುನ್ನಡೆಸುವ ಕ್ರತುಶಕ್ತಿಯನ್ನು ಸ್ವಾಮಿಯೆಂದೂ, ಅವನ ಕೃಪೆಯ ಚಾಲನಶಕ್ತಿಗೆ ಒಳಗಾಗಿ ನಡೆಯುವ ಸೇವಕರು ತಾವೆಂದೂ ನಂಬಿರುವ ಲೋಕದ ಸಾಮಾನ್ಯ ಭಾವನೆಯನ್ನು ಪ್ರತಿನಿಧಿಸುತ್ತದೆ. ಮುಂದೆ ಈ ಭಕ್ತಿಭಾವವು ವಿಕಾಸ ಗೊಂಡು ಶಾಂತ, ದಾಸ್ಯ, ಸಖ್ಯ, ವಾತ್ಸಲ್ಯ ಹಾಗೂ ಮಧುರ ಎಂಬ ಐದು ಭಾವಗಳಲ್ಲಿ ವ್ಯಕ್ತವಾಗಿದೆ. ಸತಿ–ಪತಿ ಅಥವಾ ಶರಣಸತಿ–ಲಿಂಗಪತಿಯು ಸ್ವಲ್ಪ ಮಟ್ಟಿಗೆ ಮಧುರಭಾವದ ಭಕ್ತಿಯನ್ನು ಹೋಲುತ್ತದೆ.

ಸತಿ–ಪತಿ ಭಾವದ ಕಲ್ಪನೆ ನಮ್ಮ ವಚನಕಾರರದ್ದಲ್ಲ. ಅದು ತಮಿಳುನಾಡಿನ ನಾಯನ್ಮಾರರ ಭಕ್ತಿಗೀತೆಗಳಲ್ಲಿ (ತೇವಾರಂಗಳಲ್ಲಿ) ಕಾಣಿಸಿಕೊಂಡಿದ್ದು ಬಹುಶಃ ಅವ ರಿಂದ ಪ್ರೇರಣೆಪಡೆದ ನಮ್ಮ ವಚನಕಾರರು ಆ ರೀತಿಯ ರಚನೆಗಳನ್ನು ಮಾಡಿದಂತಿದೆ. ನನಗೆ ತಿಳಿದಂತೆ ಸಂಸ್ಕೃತದಲ್ಲಿ ಏಳು ಎಂಟನೆಯ ಶತಮಾನಗಳಿಗೆ ಪೂರ್ವದಲ್ಲಿ ಸತಿ–ಪತಿ ಭಾವದ ರಚನೆಗಳಾದುದು ಕಂಡುಬರುವುದಿಲ್ಲ. ಏಳನೆಯ ಶತಮಾನದಲ್ಲಿ ಬಂದ ತಿರು ನಾವುಕ್ಕರಸರೂ, ತಿರುಜ್ಞಾನ ಸಂಬಂಧರೂ ; ಎಂಟನೆಯ ಶತಮಾನದಲ್ಲಿ ಬಂದ ಸುಂದ ರರೂ, ಮಾಣಿಕ್ಯವಾಚಕರೂ ತಮಿಳುನಾಡಿನಲ್ಲಿ ಭಕ್ತಿಸಾಹಿತ್ಯಕ್ಕೆ ತಮ್ಮ ಶ್ರೇಷ್ಠ ಕೊಡುಗೆ ಯನ್ನು ಕೊಟ್ಟಿರುವರು. ತಿರುನಾವುಕ್ಕರಸರ ಹಾಗೂ ತಿರುಜ್ಞಾನಸಂಬಂಧರ ಉಪಲಬ್ಧವಿರುವ ಕವಿತೆಗಳ ಸಂಖ್ಯೆ ಸುಮಾರು ಏಳು ಸಾವಿರ. ಸುಂದರಮೂರ್ತಿಗಳ ಉಪಲಬ್ಧವಿರುವ ಕವಿತೆಗಳ ಸಂಖ್ಯೆ ಒಂದು ಸಾವಿರ. "ಈ ಮೂವರು ನಾಯನ್ಮಾರರ ಕವಿತೆಗಳು ಎಂಟು ಸಾವಿರವೂ 'ತೇವಾರಮ್' ಎಂಬ ಹೆಸರಿನಿಂದ ಶ್ರೇಷ್ಠ ಭಕ್ತಿ ಸಾಹಿತ್ಯವಾಗಿ ಬೆಳಗುತ್ತಿವೆ. ಇವೆಲ್ಲಾ ಅಂದು ಮೊದಲು ಇಂದಿನವರೆಗೂ ರಾಗ ಯುಕ್ತವಾಗಿ ಇಂಥ 'ಪಣ್' (ರಾಗ) ಎಂದು ಗುರುತಿಸಿ ಹಾಡಲ್ಪಡುತ್ತಾ ಬರುತ್ತಿವೆ. ತಿರುಜ್ಞಾನ ಸಂಬಂಧರು ಕೈಯಲ್ಲಿ ತಾಳಹಿಡಿದು ಹಾಡಿಯೂ ನರ್ತಿಸಿಯೂ ಶಿವನನ್ನು ಆರಾಧಿಸಿದವರು. ಯಾಟ್ ಎಂಬ ವಾದ್ಯವನ್ನು ನುಡಿಸುವುದರಲ್ಲಿ ಬಲ್ಲವರಾದ ಪಾಣರ ಕುಟುಂಬಕ್ಕೆ ಸೇರಿದ ತಿರುನೀಲಕಂಠ ಯಾಟ್‌ಪಾಣರು ಅವರೊಡನೆ ಹಲವು ಊರುಗಳ ದೇವಸ್ಥಾನಗಳಿಗೆ ಹೋಗಿ, ಅವರ ಹಾಡುಗಳಿಗೆ ತಕ್ಕ ರೀತಿಯಲ್ಲಿ ಹೊಂದುವಂತೆ ಯಾಟನ್ನು ಬಾಜಿಸುತ್ತ ಬಂದರು. ಆ ಗಾನಕಲಾಭಿಜ್ಞರ ವಂಶದಲ್ಲಿ ಬಂದವರು–ಅವರ ಕುಟುಂಬದವರು-ತಲೆಮೊರೆ ತಲೆಮೊರೆಯಾಗಿ ಆ ಹಾಡುಗಳನ್ನು ಹಾಡುವುದಕ್ಕೆ ತಕ್ಕ (ರಾಗ) ಗಾನ ಪದ್ಧತಿಗಳನ್ನು ಕಾಪಾಡಿಕೊಂಡು ಬಂದರು. ಅವರು

ಕೊಟ್ಟ ರಾಗಸೂಚನೆಗಳೇ ಇನ್ನೂ ಇವೆ. ಹಾಗಾಗಿ, ತೇವಾರವು ಹಿಂದಿನ ಮಹಿಮೆ ಹೊಂದಿದ ಭಕ್ತಿಗೀತೆಗಳಾಗಿ ಇರುವುದು ಮಾತ್ರವಲ್ಲ, ಸಾವಿರದ ಮುನ್ನೂರು ವರ್ಷಗಳ ಹಿಂದೆ ಇದ್ದ ನಾಡಿನ ರಾಗಪದ್ಧತಿಗಳನ್ನು ಕಾಪಾಡಿಕೊಂಡು ಬರುವ ಪುರಾತನ ಗೀತ ಸಂಪತ್ತಾಗಿಯೂ ಇದ್ದುಕೊಂಡು ಬರುತ್ತಿವೆ...."[1] ತಿರುಜ್ಞಾನ ಸಂಬಂಧರು, ತಿರುನಾವುಕ್ಕರಸರು ಹಾಗೂ ಸುಂದರರು ರಚಿಸಿರುವ ತೇವಾರಂಗಳಲ್ಲಿ ಭಕ್ತಿಗೀತಗಳು ಹಲವಿದ್ದು, ಅವು ಆ ಭಕ್ತರ ಅಂತರಂಗ ಮಿಡಿದ ಭಾವತರಂಗಗಳಾಗಿವೆ. "ಅವು ಗಳಲ್ಲಿ ಹಾಡುವ ಭಕ್ತರು ತಮ್ಮನ್ನು ಪ್ರೇಯಸಿಯಾಗಿ ಕಲ್ಪನೆಮಾಡಿಕೊಂಡು, ಪರಶಿವ ನನ್ನು ಪ್ರಿಯನಾಗಿ ಮಾಡಿಕೊಂಡು ಹಾಡುವುದನ್ನು ಕಾಣಬಹುದು."[2] ಮಾಣಿಕ್ಕ ವಾಚಕರು ಪರಶಿವನನ್ನು ಕುರಿತು ರಚಿಸಿರುವ ಭಕ್ತಿಗೀತಗಳು 'ತಿರುವಾಚಕಮ್' ಎನ್ನಿಸಿಕೊಂಡಿವೆ. ಅವರ ಮತ್ತೊಂದು ಕೃತಿಯಾದ ತಿರುಕ್ಕೋವೈಯಾರ್ ನಾನೂರು ಪ್ರೇಮಗೀತಗಳನ್ನು ಒಳಗೊಂಡಿದೆ. "ಅದರಲ್ಲಿರುವ ನಾನೂರು ಪ್ರೇಮಗೀತಗಳು, ಪರಮೇಶ್ವರನನ್ನು ನಾಯಕನಾಗಿಯೂ ತಮ್ಮನ್ನು ನಾಯಕಿಯಾಗಿಯೂ ಭಾವಿಸಿ ಕೊಂಡು ಪ್ರೇಮಗೀತಗಳಾಗಿ ರಚಿಸಿರುವ ಗ್ರಂಥ ಅದು. ಆದರೂ ಭಕ್ತಿಗೀತಗಳಾಗಿ ಅತ್ಯಂತ ಶ್ರೇಷ್ಠವೆಂದು ಹೆಸರಾಗಿರುವವು ತಿರುವಾಚಕದಲ್ಲಿರುವ ಅವರ ಆರುನೂರೈ ವತ್ತು ಗೀತಗಳೇ.."[3] ತಮಿಳುನಾಡಿನಲ್ಲಿ ಬೌದ್ಧ ಜೈನಧರ್ಮಗಳು ಪ್ರಭಾವಶಾಲಿಗಳಾಗಿ ದ್ದಾಗ ಅವನ್ನು ಎದುರಿಸಿ ಜನತೆಯನ್ನು ಸಂಘಟಿಸಲಿಕ್ಕಾಗಿ ಭಕ್ತಿಗೀತಗಳನ್ನು ಏಳು ಎಂಟು ಮತ್ತು ಒಂಬತ್ತನೆಯ ಶತಮಾನಗಳಲ್ಲಿ ಶೈವಧರ್ಮದ ನಾಯನ್ಮಾರರು ಗಳಿಂದಲೂ ವೈಷ್ಣವಮತದ ಆಳ್ವಾರರುಗಳಿಂದಲೂ ಸೃಷ್ಟಿಗೊಂಡವು. ಇವರುಗಳು ಭಕ್ತಿಗೀತಗಳನ್ನು ರಾಗಯುಕ್ತವಾಗಿ ಹಾಡುತ್ತ ನಾಡಿನುದ್ದಗಲಕ್ಕೂ ಸಂಚರಿಸಿ ಪ್ರತಿ ಯೊಂದು ದೇವಾಲಯದಲ್ಲೂ ಭಗವಂತನನ್ನು ಆರಾಧಿಸಿದರು. ಜನರಲ್ಲಿ ಭಕ್ತಿ ಚಳುವಳಿ ಹರಡುವುದಕ್ಕೆ ಈ ತಮಿಳು ಹಾಡುಗಳು ಮಾಡಿದ ಸಹಾಯ ಅಪೂರ್ವ ವಾದುದು. ಬಹುಶಃ ತಮಿಳುನಾಡಿನ ಶೈವ ನಾಯನ್ಮಾರರ ಭಕ್ತಿ ಪ್ರಚಾರದ ಪ್ರಭಾವ ಕನ್ನಡದ ಶಿವಶರಣರ ಮೇಲೂ ಆಗಿರಬಹುದು. ತೇವಾರಮ್ ಹಾಗೂ ವಚನಗಳಲ್ಲಿ ಕಂಡುಬರುವ ಸಮಾನ ಮನೋಧರ್ಮ, ಧೋರಣೆ, ಆಲೋಚನಾ ವಿಧಾನ ಹಾಗೂ ಶೈಲಿಗಳು ವಚನಕಾರರ ಮೇಲೆ ಆಗಿರಬಹುದಾದ ನಾಯನ್ಮಾರರ

---

1. ಮು. ವರದರಾಜನ್ : ತಮಿಳು ಸಾಹಿತ್ಯ ಚರಿತ್ರೆ (ತಮಿಳಿನಿಂದ ಕನ್ನಡಕ್ಕೆ ಅನುವಾದ : ಎಲ್. ಗುಂಡಪ್ಪ) ಸಾಹಿತ್ಯ ಅಕಾದೆಮಿ, ನವದೆಹಲಿ (೧೯೬೦), ಪು. ೧೦೭
2. ಅದೇ, ಪು. ೧೧೪
3. ಅದೇ, ಪು. ೧೧೫

ಪ್ರಭಾವದ ಸುಳುಹು–ಸೂಚನೆ ನೀಡುತ್ತವೆ.4 ನಾಯನ್ಮಾರರು ತಮ್ಮ ಭಕ್ತಿಗೀತೆಗಳಲ್ಲಿ ಪ್ರತಿಪಾದಿಸಿದ ಸತಿ–ಪತಿಭಾವವೇ ವಚನಕಾರರಲ್ಲಿ 'ಶರಣಸತಿ ಲಿಂಗಪತಿ'ಯಾಗಿ ಬಂದಿದೆ ಎಂದು ಹೇಳಬಹುದು.

ಎಲ್ಲ ವಚನಕಾರರೂ ಸತಿ–ಪತಿ ಭಾವದ ವಚನಗಳನ್ನು ರಚಿಸಿಲ್ಲ. ಸಿದ್ಧರಾಮ, ಉರಿಲಿಂಗದೇವ, ಗಜೇಶ ಮಸಣಯ್ಯ, ಘನಲಿಂಗಿದೇವ ಇವರ ವಚನಗಳಲ್ಲಿ ಈ ಭಾವ ವಿಶೇಷವಾಗಿ ಒಡಮೂಡಿದೆ. ಮಹಾದೇವಿಯಕ್ಕ ಚೆನ್ನಮಲ್ಲಿಕಾರ್ಜುನನನ್ನು ತನ್ನ ಪತಿಯಾಗಿ ಭಾವಿಸಿ ಅನುಸಂಧಾನ ನಡೆಸಿದ ಶ್ರೇಷ್ಠ ವಚನಕಾರ್ತಿ. ಅವಳು ಹೆಣ್ಣಾಗಿ ಚೆನ್ನಮಲ್ಲಿಕಾರ್ಜುನನನ್ನು ಪತಿಯಾಗಿ ಭಾವಿಸಿದಳು. ಇದು ಲೋಕರೂಢಿಗೆ ಸಹಜ. ಗಂಡು ತನ್ನನ್ನು ಹೆಣ್ಣಾಗಿ ಭಾವಿಸಿ ಲಿಂಗಾನುಸಂಧಾನ ನಡೆಸುವುದು ಲೋಕರೂಢಿಗೆ ವಿರುದ್ಧ. ಆದ್ದರಿಂದಲೇ ಪುರುಷರ ಸತಿ-ಪತಿ ಭಾವದ ವಚನಗಳಿಗೆ ಹೆಚ್ಚಿನ ಮಹತ್ವ. ಪುರುಷರ ವಚನಗಳಲ್ಲಿನ ಸಮರ್ಪಣಭಾವ ಉಜ್ವಲವಾಗಿದೆ. ತಮ್ಮನ್ನು ಸತಿಯನ್ನಾಗಿ ಭಾವಿಸಿ ಇವರು ನಡೆಸುವ ಪರಿಚರ್ಯೆ, ಪ್ರಕಟಿಸುವ ತನಿನಿಷ್ಠೆ, ಅಭಿವ್ಯಕ್ತಗೊಳಿಸುವ ಶೃಂಗಾರಭಾವಗಳು ಆತ್ಯಾಶ್ಚರ್ಯಕರವೂ ಅನ್ಯಾದೃಶವೂ ಆಗಿವೆ. ಮೇಲೆ ಹೇಳಿದ ವಚನಕಾರರಲ್ಲದೆ ಬೇರೆ ವಚನಕಾರರೂ ಆಗೊಮ್ಮೆ ಈಗೊಮ್ಮೆ ಸತಿಪತಿಭಾವದ ವಚನಗಳನ್ನು ರಚಿಸಿರುವರು. ಆದರೆ, ಇವರ ವಚನಗಳ ಸಂಖ್ಯೆ ಕಡಿಮೆ. ಪ್ರಭುದೇವ, ಅಂಬಿಗರ ಚೌಡಯ್ಯರಂತಹ ನಿಷ್ಠುರವಾದಿಗಳು ಸತಿ–ಪತಿ ಭಾವವನ್ನೇ ನಿರಾಕರಿಸುವರು.5 ಪ್ರಭುವು ಸತಿ–ಪತಿ ಭಾವವನ್ನು ಪರಮಾತ್ಮನನ್ನು ನಲ್ಲನನ್ನಾಗಿ ಸ್ವೀಕರಿಸುವಷ್ಟಕ್ಕೇ ಮೀಸಲು ಮಾಡುವನು. ಶರಣಸತಿ–ಲಿಂಗಪತಿ ಎಂದು ನುಡಿದು ಆದರಂತೆ ನಡೆಯದ ಜನರ ವರ್ತನೆಯನ್ನು ಕಂಡು :

---

4. ಈ ದಿಶೆಯಲ್ಲಿ ಕೆಲಸ ಏನೇನೂ ಆಗಿಲ್ಲ. ಪ್ರೊ॥ ಡಿ. ಎಲ್. ನರಸಿಂಹಾಚಾರ್‌ರವರು ತೇವಾರಂಗಳು ವಚನಗಳ ನಿರ್ಮಾಣಕ್ಕೆ ಸ್ಫೂರ್ತಿ ನೀಡಿರಬಹುದೆಂದು ಊಹಿಸಿರುವರು (ನೋಡಿ : ಪೀಠಿಕೆಗಳು ಲೇಖನಗಳು, ಪು. ೪೪೩). ಕ್ರಿ. ಶ. ೫ರಿಂದ ೯ನೆಯ ಶತಮಾನದವರೆಗಿನ ಅವಧಿಯಲ್ಲಿ ಬರುವ ತಮಿಳುನಾಡಿನ ೬೩ ಮಂದಿ ಶೈವ ಪುರಾತನರ ಬದುಕು-ಮಣಿಹಗಳು ವೀರಶೈವ ಕವಿಗಳ ಮೇಲೆ ಬಹುದೊಡ್ಡ ಪ್ರಭಾವ ಬೀರಿವೆ.

5. ಪ್ರಭುದೇವನ ವಚನಗಳು ಪರಮಜ್ಞಾನಿಯ ನೆಲೆಯಲ್ಲಿ ಬೋಧಿಸುತ್ತವೆ. ಶರಣಸತಿ–ಲಿಂಗಪತಿ ಭಾವದ ಅನುಸಂಧಾನ ಅವನ ವ್ಯಕ್ತಿತ್ವಕ್ಕೆ ಸರಿಹೋಗುವುದಿಲ್ಲ. ಆದರೂ, ಅವನ ಎರಡು ವಚನಗಳು ಈ ಭಾವವನ್ನು ಬೆಂಬಲಿಸುವಂತೆ ತೋರುತ್ತದೆ. ಪರಮಾತ್ಮನನ್ನು ನಲ್ಲನನ್ನಾಗಿ ಪರಿಭಾವಿಸುವ ಅವನ ವಚನ ಕೆಳಗಿನಂತಿದೆ:

ಅಳವಱಿಯದ ಭಾಷೆ,
ಬಹುಕುಳವಾದ ನುಡಿ
ಇಂತೆರಡಱ ನುಡಿ ಹುಸಿಯಯ್ಯಾ.
ಬಹುಭಾಷಿತರು ಸುಭಾಷಿತವರ್ಜಿತರು
ಶರಣಸತಿ–ಲಿಂಗಪತಿ ಎಂಬರ ಹುಸಿಯಯ್ಯಾ.
ಇಂತಪ್ಪವರ ಕಂಡು ನಾಚುವೆನಯ್ಯಾ ಗುಹೇಶ್ವರಾ. (ವ. ೧೩೦)

ಎಂದು ಆಕ್ಷೇಪಿಸುವನು. ಮತ್ತೊಂದು ವಚನದಲ್ಲಿ

ಸತಿ–ಪತಿಯೆಂಬ ಅಂಗಸುಖ ಹಿಂಗಿ
ಲಿಂಗವೆ ಪತಿಯಾದ ಬಳಿಕ,
ಸತಿಗೆ ಪತಿಯುಂಟೆ ? ಪತಿಗೆ ಸತಿಯುಂಟೆ ?
ಪಾಲುಂಡು ಮೇಲುಂಬರೆ ಗುಹೇಶ್ವರಾ ? (ವ. ೧೪೮)

ಎಂದು ಸತಿ–ಪತಿ ಭಾವದ ನಿಲುಮೆಗೆ ಅರ್ಥ ಕಲ್ಪಿಸುವನು. ಅಂಬಿಗರ ಚೌಡಯ್ಯನು ಶರಣಸತಿ–ಲಿಂಗಪತಿ ಎಂಬ ಮಾತು ಮೊದಲಿಗೆ ಮೋಸ ಎಂದು ಕಟುವಾಗಿ ಆಕ್ಷೇಪಿಸುವನು. ಅವನ ಕೆಳಗಿನ ವಚನದಲ್ಲಿ ಈ ಭಾವದ ವಿಡಂಬನೆಯೇ ಪ್ರಧಾನವಾಗಿ ಬಂದಿದೆ :

ಶರಣಸತಿ ಲಿಂಗಪತಿ ಎಂಬರು.
ಶರಣ ಹೆಣ್ಣಾದ ಪರಿ ಇನ್ನೆಂತು ?
ಲಿಂಗ ಗಂಡಾದ ಪರಿ ಇನ್ನೆಂತು ?
ನೀರು ನೀರ ಕೂಡಿ ಬೆರೆದಲ್ಲಿ

---

ನಿಚ್ಚಕ್ಕೆ ನಿಚ್ಚ ಒತ್ತೆಯ ಬೇಡಿದಡೆ
ಅಚ್ಚುಗವಾಯಿತ್ತವ್ವಾ ನಮ್ಮ ನಲ್ಲಂಗೆ
ಕಿಚ್ಚನೆ ಹೊತ್ತುಕೊಂಡು ಅರ್ಚನೆಯನಾಡಲು
ಅಚ್ಚುಗವಾಯಿತ್ತವ್ವಾ ನಮ್ಮ ನಲ್ಲಂಗೆ
ಅರ್ಚನೆಯ ಗಳಿಪವನಿಳುಹಿದಡೆ
ಬಳಿಕ ನಿಶ್ಚಿಂತವಾಯಿತ್ತು ಗುಹೇಶ್ವರಾ. (ವ. ೧೦೬)

ಅತಿಕಾಮಿಯಾದ ಗುಹೇಶ್ವರ ತನ್ನನ್ನು ಲಜ್ಜೆಗೆಟ್ಟು ಕೂಡಿದುದನ್ನು ಪ್ರಭು ಹೀಗೆ ಹೇಳುವನು :

ಸೆರಗ ಹಿಡಿದನು, ಸೀರೆಯ ಹರಿದನು
ಹುಟ್ಟ ಮುರಿದನು, ಕಂದಲನೊಡೆದನು.
ಭಂಡನವ್ವಾ, ಲಜ್ಜೆ ಭಂಡನವ್ವಾ !
ಕಂಡಡೆ ನುಡಿಸದಿರೆಲೆ ಮಾಯಾದೇವಿ. (ವ. ೧೩೧೪)

ಭೇದಿಸಿ ಬೇಟಿ ಮಾಡಬಹುದೆ ?
ಗಂಡು-ಹೆಣ್ಣಿ ಯೋಗವಾದಲ್ಲಿ
ಆತುರ ಹಿಂಗೆ ಘಟ ಬೇಱಾಯಿತ್ತು.
ಶರಣಸತಿ–ಲಿಂಗಪತಿ ಎಂಬ ಮಾತು
ಮೊದಲಿಗೆ ಮೋಸ, ಲಾಭಕ್ಕದೀನವುಂಟೆ ? (ವ. ೧೬೪)

ಬಸವಣ್ಣನ ಕೆಲವೇ ಕೆಲವು ವಚನಗಳಲ್ಲಿ ಸತಿ–ಪತಿ ಭಾವವು ಬಂದಿದ್ದರೂ, ಅಭಿವ್ಯಕ್ತಗೊಳ್ಳುವಾಗ ಅವು ಭಾವಪೂರ್ಣವಾಗಿವೆ. "ಲಿಂಗವ ಗೆಲುವರೆ 'ಶರಣಸತಿ ಲಿಂಗಪತಿ' ಎಂಬುದೊಂದಲಗು ಸಾಲದೆ ?" (ವ. ೭೩೭) ಎನ್ನುವ ಬಸವಣ್ಣ ತನ್ನನ್ನು ಕೂಡಲಸಂಗಯ್ಯನ ಸತಿಯಾಗಿ ಭಾವಿಸಿ ಏಕನಿಷ್ಠೆಯಿಂದ ಪತಿಯ ಮನಸ್ಸನ್ನು ಗೆಲ್ಲುವ ಪ್ರಯತ್ನ ನಡೆಸಿರುವವನು. ಲೋಕಕ್ಕೆಲ್ಲಾ ತಿಳಿಯುವಂತೆ ತನ್ನ ಸತೀತ್ವವನ್ನು ಹೀಗೆ ತಿಳಿಯಪಡಿಸುವವನು :

ಜಗವೆಲ್ಲಾ ಅರಿಯಲು ಎನಗೊಬ್ಬ ಗಂಡನುಂಟು :
ಆನು ಮುತ್ತೈದೆ, ಆನು ನಿಚ್ಚೈದೆ.
ಕೂಡಲಸಂಗಯ್ಯನಂತಪ್ಪ
ಎನಗೊಬ್ಬ ಗಂಡನುಂಟು. (ವ. ೫೦೬)

ಪತಿವ್ರತೆಗೆ ಸದಾ ಗಂಡನದೇ ಚಿಂತೆ. ಪತಿಯ ಒಲವು ತನ್ನ ಮೇಲೆ ಇನ್ನೂ ಮೂಡದ ಬಗೆಗೆ ಸತಿ ಚಿಂತಿಸುವಂತೆ, ಕೂಡಲಸಂಗಯ್ಯನ ಕರುಣೆ ತನ್ನ ಮೇಲಾಗದ್ದರ ಬಗೆಗೆ ಬಸವಣ್ಣ ಚಿಂತಿಸುವನು :

ಅರಿಸಿನವನೆ ಮಿಂದು ಹೊಂದುಡಿಗೆಯನೆ ತೊಟ್ಟು,
ಪುರುಷನ ಒಲವಿಲ್ಲದ ಲಲನೆಯಂತಾಗಿರ್ದೆನಯ್ಯಾ !
ವಿಭೂತಿಯನೆ ಹೂಸಿ, ರುದ್ರಾಕ್ಷಿಯನೆ ಕಟ್ಟಿ
ಶಿವ ನಿಮ್ಮೊಲವಿಲ್ಲದಂತೆ ಆಗಿರ್ದೆನಯ್ಯಾ !
ಕೆಟ್ಟು ಬಾಳುವರಿಲ್ಲಾ ಎಮ್ಮವರ ಕುಲದಲ್ಲಿ ;
ನೀನೊಲಿದಂತೆ ಸಲಹಯ್ಯಾ,
ಕೂಡಲಸಂಗಮದೇವಾ ! (ವ. ೨೭೨)

ಪತಿವ್ರತೆಯಾದವಳು ಪರಪುರುಷನನ್ನು ಬಯಸಬಾರದು. ತಾನು ಪತಿವ್ರತೆಯಾಗಿ ಪರಪುರುಷನನ್ನು ಬಯಸಿದ್ದೇ ಆದರೆ

ಕುರುಳು ಬೆರಳು ಮೂಡಹು ಮುಂಬಲ್ಲ ಕೊಳ್ಳಾ ;
ನಿಱಿಯನಿಕ್ಕಿ ದಾಂಟಿದರೆ ಅಂತೆನ್ನ ನಂಬಾ !
ಪರಪುರುಷರ ಮುಖವ ನೋಡದಂತೆ ಮಾಡಾ ;

ಬಳಿಕ ನೀ ಹೇಂಗಿರಿಸಿದಂತೆ ಇರಿಸಾ !
ಎನ್ನುರದಲ್ಲಿ ಕೂಡಲಸಂಗಯ್ಯನೆಂದು ಬರೆಯಾ ;
ಪರಿಬ್ರಹ್ಮರಿಗೆಱಗದಂತೆ ಬಳಿನೀರನೆಱೆಯಾ ! (ವ. ೫೦೨)

ಎನ್ನುವನು: ಇಲ್ಲಿ ವ್ಯಕ್ತವಾಗಿರುವ ಪತಿನಿಷ್ಠೆ ಅತ್ಯಪೂರ್ವವಾದುದು. ಪರಪುರುಷರು ತನ್ನನ್ನು ನೋಡುವಂತೆ ಮಾಡುವುದು ತನ್ನ ಆಕರ್ಷಕವಾದ ದೇಹದ ಸೊಬಗು. ಸೊಬಗಿನ ನೆಲೆಗಳಾದ ಕುರುಳು ಬೆರಳು ಮುಡಹು ಮುಂಬಲ್ಲು ಇವನ್ನು ತೆಗೆದು ನನ್ನ ದೇಹದ ಸೌಂದರ್ಯ ವಿಕಾರಗೊಳ್ಳುವಂತೆ ಮಾಡು, ಆ ಮೂಲಕ ನಾನು ಪರಪುರುಷರ ಮುಖವನ್ನು ನೋಡದಂತೆ ಮಾಡು ಎನ್ನುವಲ್ಲಿ ಬಸವಣ್ಣನ ಪತಿನಿಷ್ಠೆ ಪರಾಕಾಷ್ಠೆಯನ್ನು ಮುಟ್ಟುತ್ತದೆ. (ಯಾವ ಹೆಣ್ಣಿಗೇ ಆಗಲಿ, ತನ್ನ ರೂಪದ ಬಗೆಗೆ ಅಭಿಮಾನವಿರುತ್ತದೆ. ತನ್ನ ಅಂದಚೆಂದವನ್ನು ಯಾವ ಹೆಣ್ಣೂ ವಿರೂಪಗೊಳಿಸಿಕೊಳ್ಳಲು ಮನಸಾ ಇಷ್ಟಪಡುವುದಿಲ್ಲ.)

ನಂಬಿದ ಪತಿವ್ರತೆಗೆ ಗಂಡನೊಬ್ಬ ಹೇಗೋ ಹಾಗೆ ನಂಬಿದ ಪುರುಷನಿಗೆ ಒಂದೇ ದೈವ. ಅನ್ಯದೈವಗಳಿಗೆರಗದಂತೆ ಮಾಡೆಂದು ಬಸವಣ್ಣನು ಸಂಗಯ್ಯನನ್ನು ಪ್ರಾರ್ಥಿಸುವಲ್ಲೂ ಪತಿನಿಷ್ಠೆ ವ್ಯಕ್ತಗೊಂಡಿದೆ :

ಮನಕ್ಕೆ ಮನೋಹರವಲ್ಲದ ಗಂಡರು
ಮನಕ್ಕೆ ಬಾರರು, ಕೇಳವ್ವಾ ಕೆಳದೀ,
ಪನ್ನಗಭೂಷಣರಲ್ಲದ ಗಂಡರು
ಇನ್ನೆನಗಾಗದ ಮೊಱೆ, ನೋಡವ್ವಾ !
ಕನ್ನೆಯಂದಿನ ಕೂಟ : ಚಿಕ್ಕಂದಿನ ಬಾಳುವೆ,
ನಿಮ್ಮಾಣೆಯಯ್ಯಾ ಕೂಡಲಸಂಗಮದೇವಾ. (ವ. ೫೦೫)

ತನ್ನ ಹಾಗೂ ತನ್ನ ನಲ್ಲನ ಆತ್ಮೀಯ ಸಂಬಂಧ ಇತ್ತೀಚಿನದಲ್ಲ, ಅದು ತೀರಾ ಹಳೆಯದು ; ತಾನು ಸಂಗಯ್ಯನ ಬಾಲ್ಯಕಾಲಸಖಿ ಎಂಬ ಧ್ವನಿ 'ಕನ್ನೆಯಂದಿನ ಕೂಟ : ಚಿಕ್ಕಂದಿನ ಬಾಳುವೆ' ಎಂಬ ಮಾತಿನಲ್ಲಿ ವ್ಯಕ್ತವಾಗುತ್ತದೆ. ತನ್ನ ಹಾಗೂ ತನ್ನ ಪತಿಯ ಒಲುಮೆ ಬಾಲ್ಯದಿಂದ ಬೆಳೆದುಬಂದುದು, ಹೆಚ್ಚು ಆತ್ಮೀಯವಾದುದೆಂಬುದನ್ನು ತನ್ನ ಅಂತರಂಗದ ಗೆಳತಿಯೋರ್ವಳಿಗೆ ಹೆಣ್ಣೋರ್ವಳು ನಿವೇದನೆ ಮಾಡುತ್ತಿರುವಂತೆ ಇಲ್ಲಿ ನಿರೂಪಿಸಲಾಗಿರುವುದು ಮುಖ್ಯ. ಅರಿಷಡ್ವರ್ಗಗಳು ಪರಮಾತ್ಮನ ಧ್ಯಾನಕ್ಕೆ ಅಡ್ಡಿಮಾಡುವುದನ್ನು ಕಂಡು ಬಸವಣ್ಣ ತನ್ನ ಮನದೊಡೆಯನನ್ನು ಸತಿ–ಪತಿ ಭಾವದ ಸಾಂಕೇತಿಕ ನೆಲೆಯಲ್ಲಿ ಹೀಗೆ ಪ್ರಾರ್ಥಿಸುವನು :

ಸಂಸಾರವೆಂಬ ಶ್ವಾನನಟ್ಟಿ ಮೀಸಲ ಬೀಸರ ಮಾಡದಿರಯ್ಯಾ.
ಎನ್ನ ಚಿತ್ತವು ನಿಮ್ಮ ಧ್ಯಾನವಯ್ಯ :

ನೀವಲ್ಲದೆ ಮತ್ತೇನನೂ ಅರಿಯೆನು.
ಕನ್ನೆಯಲ್ಲಿ ಕೈವಿಡಿದೆನು, ನಿಮ್ಮಲ್ಲಿ ನೆರೆದೆನು,
ಮನ್ನಿಸು ಕಂಡಾ, ಮಹಾಲಿಂಗವೇ,
ಸತಿಯಾನು ಪತಿ ನೀನು ಆಯ್ಯಾ :
ಮನೆಯೊಡೆಯ ಮನೆಯ ಕಾಯ್ದಿಪ್ಪಂತೆ
ನೀನೆನ್ನ ಮನವ ಕಾಯ್ದಿಪ್ಪ ಗಂಡನು !
ನಿಮಗೋತ ಮನವನನ್ಯಕ್ಕೆ ಹರಿಸಿದರೆ ನಿನ್ನಭಿಮಾನ ಹಾನಿ....

(ವ. ೫೦೭)

ಭಕ್ತನ ದೇಹದಲ್ಲಿ ಪರಮಾತ್ಮ ನೆಲೆಸಬೇಕಾದರೆ ಮೊದಲಿಗೆ ಅವನ ಅಜ್ಞಾನ ಪರಿಹಾರಗೊಂಡು, ಬಹಿರಂಗದಷ್ಟೇ ಅಂತರಂಗವೂ ಶುದ್ಧವಾಗಬೇಕು. ಹೀಗೆ ಪರಿಪೂರ್ಣ ಶುದ್ಧಾಂಗವಾದ ಭಕ್ತನಲ್ಲಿ ಪರಮಾತ್ಮ ನೆಲೆಗೊಳ್ಳುವನೆಂಬುದನ್ನು ಬಸವಣ್ಣ ಸಂಗಯ್ಯನ ಸತಿಯಾಗಿ ಮಾರ್ಮಿಕವಾಗಿ ಹೀಗೆ ಹೇಳುವನು :

ಮನೆಯ ಗಂಡನ ಮನೆವಾರ್ತೆಯಃನೇನ ಹೇಳುವೆನವ್ವಾ !
ಅಂಗವಿದ್ಯೆಯನೊಲ್ಲ ;
ಕಣ್ಗಳೊಳಗಣ ಕಸವ ಕಳೆದಲ್ಲದೆ ನೋಡಲೀಯ ;
ಕೈಯ ತೊಳೆದಲ್ಲದೆ ಮುಟ್ಟಲೀಯ
ಕಾಲ ತೊಳೆದಲ್ಲದೆ ಹೊದ್ದಲೀಯ !
ಇಂತೀ ಸರ್ವಾಂಗ ತಲೆದೊಳೆದ ಕಾರಣ
ಕೂಡಲಸಂಗಮದೇವನೆನ್ನ ಕೂಡಿಕೊಂಡನವ್ವಾ ! (ವ. ೬೧೪)

ಅಂತರಂಗದಲ್ಲಿ ನೆಲೆಗೊಂಡಿರುವ ಕೂಡಲಸಂಗಯ್ಯನ ಬಗೆಗೆ ಆವನ ಸತಿಯಾದ ಬಸವಣ್ಣನು ತನ್ನೊಡೆಯನ ವೈಚಿತ್ರ್ಯಗಳನ್ನು ಹದಿಬದೆಯೋರ್ವಳು ತನ್ನ ಆಪ್ತ ಗೆಳತಿಗೆ ಹೇಳುವ ಧಾಟಿಯಲ್ಲಿ ಹೇಳುವನು :

ಎಲ್ಲರ ಗಂಡರ ಪರಿಯಂತಲ್ಲ ನೋಡವ್ವಾ :
ನಮ್ಮ ನಲ್ಲ ಸುಳಿಯಲಿಲ್ಲ ;
ಸುಳಿದು ಸಿಂಗಾರವ ಮಾಡಲಿಲ್ಲ !
ಕೂಡಲಸಂಗಮದೇವನು ತನ್ನೊಳಗೆ ಬೈಚಿಟ್ಟನಾಗಿ (ವ. ೮೫೨)

ಷಟ್ಸ್ಥಲಜ್ಞಾನಿಯಾದ ಚೆನ್ನಬಸವಣ್ಣನೂ ಸತಿ–ಪತಿಭಾವದ ವಚನಗಳನ್ನು ಬರೆದಿರುವನು. ಪರಮ ವಿರಾಗಿಯಾದ ಆತ ತನ್ನನ್ನು ಸಂಗಯ್ಯನ ಮದುವಳಿಗೆ

ಯೆಂದು ಕರೆದುಕೊಂಡು ತನಗೂ ಸಂಗಯ್ಯನಿಗೂ ನಡೆದ ವಿವಾಹದ ಚಿತ್ರವನ್ನು ವಚನವೊಂದರಲ್ಲಿ ಹೀಗೆ ಕೊಟ್ಟಿರುವನು :

ಬಸವ ಬಂದಿಗಟ್ಟೆ, ಸಂಗಯ್ಯ ಮದವಳಿಗ, ನಾನು ಮದುವಳಿಗೆ,
ವಸುಧೆ ಭಕ್ತರೆಲ್ಲರೂ ನಿಬ್ಬಣಿಗರು, ಅಂಗವಿಸಿ ಭೋ! ಅಂಗವಿಸಿ ಭೋ!
ಶುದ್ಧ ಶಿವಾಚಾರವೆಂಬ ಮನೆಯಲ್ಲಿ ಮದುವೆಯಾಯಿತ್ತಾಗಿ,
ಕೂಡಲ ಚೆನ್ನಸಂಗಯ್ಯನೊಬ್ಬನೆ ಅಚಳ ;
ನಾವೆಲ್ಲರೂ ನಿತ್ಯಮುತ್ತೈದೆಯರಾಗಿ. (ವ. ೩೩೬)

ಚೆನ್ನಬಸವಣ್ಣನು ತಾತ್ತ್ವಿಕ ಚಿಂತನೆಯನ್ನು ಹೇಳಲು ಸತಿ–ಪತಿ ಭಾವವನ್ನು ಬಳಸುವನು. ಒಂದು ವಚನದಲ್ಲಿ, ಅನಾದಿ ವಸ್ತುವೆ ಗುರು-ಶಿಷ್ಯ, ಭಕ್ತ–ಜಂಗಮ, ಗುರು–ಲಿಂಗ, ಶರಣಸತಿ–ಲಿಂಗಪತಿಯೆಂಬ ಸಾಕಾರಲೀಲೆಯ ಧರಿಸಿತೆಂದು ಹೇಳಿದರೆ (ವ. ೩೪೫), ಮತ್ತೊಂದು ವಚನದಲ್ಲಿ, ಎನ್ನ ದೇಹ ಇಂದ್ರಿಯ ಮನ ಪ್ರಾಣಾದಿಗಳು ಲಿಂಗದ ಸತಿಗಳಾಗಿ ಲಿಂಗಕ್ಕಂದೆ ಬಯಸಿ ಲಿಂಗಪ್ರಾಣಿಗಳಾವ ಕಾರಣ ಲಿಂಗಕ್ಕಿಂದೆ ಕೊಟ್ಟುಕೊಂಬೆನು, ಅನರ್ಪಿತವನರಿಯೆ ಎನ್ನುವನು (ವ. ೬೧೮). ಶರಣ ಸ್ಥಲದಲ್ಲಿ ಶರಣಸತಿ ಲಿಂಗಪತಿಯೆಂಬೆರಡಳಿದು ಐಕ್ಯಸ್ಥಿತಿಗೇರುವುದನ್ನು ವಚನ ೧೧೭೭ರಲ್ಲಿ ಹೇಳಿರುವನು. ಶರಣನಾದರೆ ಸತಿಪತಿ ಭಾವವಳಿದುಳಿದಿರಬೇಕು (ವ. ೧೨೮೧) : ಶರಣನಾದರೆ ಸತಿಪತಿ ಎಂದರಿತು ಅರಿಯದಂತಿರಬೇಕು (ವ. ೧೪೦೧) ; ಶರಣಸತಿ ಲಿಂಗಪತಿ ಎಂಬುಭಯವಳಿದು ಪರಮಾನಂದದಲ್ಲಿಪ್ಪುದೀಗ ತೃತೀಯ ಬೋಳು (ವ. ೧೨೮೪) ; ಶರಣಸತಿ ಲಿಂಗಪತಿ ಎಡಿವಲ್ಲಿಂದತ್ತತ್ತ ಲಿಂಗೈಕ್ಯ ನೆನಿಸುವೆ (ವ. ೧೮೯೦)–ಹೀಗೆ ಕೂಡಲ ಚೆನ್ನಸಂಗನ ಶರಣಸತಿ ಲಿಂಗಪತಿ ಪರಿಪೂರ್ಣ ವೆಂದು ಚೆನ್ನಬಸವಣ್ಣ ಹಲವೆಡೆ ಹೇಳುವನು.

ಸಿದ್ಧರಾಮ ಪರಮ ವಿರಾಗಿ. ಅವನು 'ಶರಣಸತಿ ಲಿಂಗಪತಿ' ಭಾವದ ವಚನ ಗಳನ್ನು ಹೆಚ್ಚಿನ ಸಂಖ್ಯೆಯಲ್ಲಿ ಬರೆದವರಲ್ಲಿ ಒಬ್ಬನು. ಅದಕ್ಕಿಂತ ಹೆಚ್ಚಾಗಿ ಅವನ ವಚನಗಳಲ್ಲಿ ಶರಣಸತಿಯಾದ ಮನೋಸ್ಥಿತಿಯ ಸಂಕೀರ್ಣ ಭಾವಗಳ ಸೊಗಸಾದ ಹಲವು ಚಿತ್ರಗಳು ಕಾಣಸಿಗುತ್ತವೆ. ಇಂತಹ ಚಿತ್ರಗಳು ಉರಿಲಿಂಗದೇವನಲ್ಲಿಯೂ ಕಂಡುಬರುವುದಿಲ್ಲ. ಅನುಭಾವದ ನೆಲೆಯಲ್ಲಿ ಚಿತ್ತಸ್ಥಿತಿ ಪಡೆಯುವ ಸೂಕ್ಷ್ಮಾನುಭವ ಗಳನ್ನು ಶಾಬ್ದಿಕವಾಗಿ ಸೆರೆಹಿಡಿಯುವುದು ಬಹಳ ಕಷ್ಟದ ಕೆಲಸ. ಸಿದ್ಧರಾಮನ ವಚನಗಳಲ್ಲಿ ಈ ಅನುಪಮಸಿದ್ಧಿ ಸಾಧಿತವಾಗಿದೆ. ಅವನ ಸತಿಪತಿ ಭಾವದ ಹಲವು ವಚನಗಳಲ್ಲಿ ನಾವಿದನ್ನು ಮನಗಾಣಬಹುದು.

ವೈರಾಗ್ಯಮೂರ್ತಿಯಾದ ಸಿದ್ಧರಾಮ ಕಪಿಲಸಿದ್ಧಮಲ್ಲಿನಾಥನ ಸತಿಯಾಗಿ ತನ್ನ ಮನಸ್ಸನ್ನು ನಿವೇದಿಸಿಕೊಳ್ಳುವುದು ಲೌಕಿಕದೃಷ್ಟಿಗೆ ವಿಚಿತ್ರವಾಗಿ ಕಾಣಿಸಬಹುದು.

ಇಲ್ಲಿ ಶರಣಸತಿಯಾಗುವುದೆಂದರೆ, ಲಿಂಗಕ್ಕೆ ಮನವನ್ನರ್ಪಿಸಿ ವಧುವಾಗುವುದು, ಲಿಂಗವನ್ನೇ ಪತಿಯಾಗಿ ಭಾವಿಸುವುದು. ಹೀಗೆ ಭಾವಿಸಿ ಭಕ್ತಿಯಾಚರಿಸುವ ಶಿವಭಕ್ತನನ್ನು ಅಂತಹವನಿಂತವನೆಂದರೆ ಕಪಿಲಸಿದ್ಧಮಲ್ಲಿನಾಥನು ಅಘೋರ ನರಕದಲ್ಲಿಕ್ಕುವನೆಂದು ಸಿದ್ಧರಾಮ ಮೊದಲಿಗೇ ಎಚ್ಚರಿಕೆ ನೀಡುವನು (ವ. ೪೨೧). "ಎನ್ನ ದೇಹದ ಸುಖವ ಲಿಂಗ ಭೋಗಿಸುವುದಾಗಿ ಶರಣಸತಿ ಲಿಂಗಪತಿ ಎಂಬ ಭಾವ ಅಳವಟ್ಟಿತ್ತಯ್ಯಾ ಎಲೆ, ಕಪಿಲಸಿದ್ಧಮಲ್ಲಿಕಾರ್ಜುನಾ" (ವ. ೧೧೭೬) ಎಂದು ಸ್ವತಃ ಸಿದ್ಧರಾಮನೇ ವಿವರಣೆ ನೀಡಿರುವನು. ಶರಣನು ಸತಿ–ಪತಿ ಭಾವದಲ್ಲಿ ಪರಮಾತ್ಮನೊಡನೆ ಅನುಸಂಧಾನ ನಡೆಸುವಾಗ ಲಿಂಗದ ರಾಣಿವಾಸವಾಗುವನು. ಸಿದ್ಧರಾಮ ಹೇಳುವಂತೆ ಕಪಿಲಸಿದ್ಧಮಲ್ಲಿಕಾರ್ಜುನನನ್ನು ಒಡಗೂಡಿದ ಶರಣನು–

ಶರಣನಾದಡೆ ಸತಿಯಗೂಡಾಟವೇಕಯ್ಯಾ ?
ಇಂದ್ರಿಯಗಳು ಹರಿಯಲೇಕೆ ? ತಾನೆ ಸತಿ ಲಿಂಗವೆ ಪತಿಯಾದ ಬಳಿಕ ?
ಸರ್ವ ಸಂಯೋಗಕ್ಕೆ ಲಿಂಗವೇ ಪತಿ, ತಾನೆ ಸತಿಯಾದಾತ
ಅನ್ಯಸತಿಯರಿಗೆಱಗ ;
ಕರಣಂಗಳ ಹರಿಯಲೀಯ ; ಕಾರ್ಪಣ್ಯಕ್ಕೊದಗ. (ವ. ೧೧೭೫)

ಕಪಿಲಸಿದ್ಧಮಲ್ಲಿಕಾರ್ಜುನನ ರಾಣಿವಾಸವಾದ ಮೇಲೆ ತಾನು 'ಎಮ್ಮಕ್ಕ ಮಹಾದೇವಿ, ಎಮ್ಮಕ್ಕ ಗಂಗಾದೇವಿ, ಹಿರಿಯಕ್ಕ ಚಿಕ್ಕಕ್ಕ ಎಂದಡೆ ವಿರೋಧ' (ಕಾರಣ, ಅವರು ಇನ್ನು ಮುಂದೆ ಸವತಿಯರು). 'ವಿರೋಧಿಸಿದಡೇನು ? ತಾನು ಚಿಕ್ಕಾಕೆ ಕಪಿಲಸಿದ್ಧಮಲ್ಲಿಕಾರ್ಜುನಂಗೆ' (ವ. ೧೧೭೮) ಎಂದು ಯಾವ ಸಿಗ್ಗೂ ಇಲ್ಲದೆ ಸಿದ್ಧರಾಮ ಹೇಳಿಕೊಳ್ಳುವನು.

ಯೌವನ ತುಂಬಿ ನಿಂತ ಹೆಣ್ಣಿಗೆ ಹರೆಯ ಮೈಯನೇರಿ ಬಂದಾಗ, ಪುರುಷನ ಕರೆಗಾಗಿ ಕಾತರಿಸಿ, ತನ್ನ ಯೌವನ ನಿರರ್ಥಕವಾಗುತ್ತದೆಯೆಂಬ ನಿಟ್ಟುಸಿರಿಡುವ ಹೆಣ್ಣಿನ ಚಿತ್ರಸ್ಥಿತಿಯನ್ನು ಸಿದ್ಧರಾಮ ಹೋಲಿಕೆ ಕೊಡುತ್ತಾ :

ಎಲೆ ಅಯ್ಯಾ, ಎನಗೆ ಜವ್ವನವೇಱಿತ್ತಯ್ಯಾ, ಹರೆಯ ಹತ್ತಿತ್ತಯ್ಯಾ,
ಜವ್ವನಕ್ಕೆ ಜಯವಂತನಿಲ್ಲ, ಹರೆಯಕ್ಕೆ ಹರುಷಿತನಿಲ್ಲ,
ಪ್ರಾಯಕ್ಕೆ ಪ್ರೌಢಿಗನಿಲ್ಲದೆ ಭ್ರಮೆಬಡುತ್ತಿದ್ದೇನಯ್ಯಾ
ಜವ್ವನಿಗ ಜಯವ ಮಾಡಿದಡೆ ಆನು ಬದುಕುವೆನಯ್ಯಾ ! (ವ. ೬೩೫)

ಎನ್ನುವನು. ವಿರುಜವ್ವನದ ಹೆಣ್ಣಿನ ಮನದ ತುಡಿತ–ಮಿಡಿತಗಳನ್ನು, ಕಾಂಕ್ಷೆಯನ್ನು ಹೇಳಹೇಳುತ್ತಲೇ ಪ್ರಿಯತಮನ ನಿರೀಕ್ಷೆಯಲ್ಲಿ ಬೇಯುತ್ತಿರುವ, ಸವಿಮಾತಿಗಾಗಿ ಕಾತರಿಸಿರುವ ತನ್ನ ಚಿತ್ತದ ಸ್ಥಿತಿಯನ್ನೂ ಸಿದ್ಧರಾಮ ತಿಳಿಯಪಡಿಸುವನು.

ಗಾಢವಾಗಿ ಪ್ರೀತಿಸುವ ಗಂಡನನ್ನು ಕಾಣದೆ ಆತನ ಆಗಮನಕ್ಕಾಗಿ ಹಂಬಲಿಸುವ ಹೆಣ್ಣಿನ ಕಾತುರದ ಚಿತ್ರವನ್ನು ಸಿದ್ಧರಾಮ ಹೀಗೆ ಕೊಡುವನು :

ಮುಂದಲೆವಿಡಿದು ಮೋಹಿಸುವ ಗಂಡನ ಕಾಣದೆ
ಬಾಯ್ಬಿಡುತ್ತಿದ್ದೇನೆ ಗುರುವೆ.
ಈ ಮಂದಮತಿಯ ಮುಂಡವ ಕೊಂಡೊಯ್ದು
ಸಂದೇಹವಿಲ್ಲದೆ ಎನ್ನ ಗಂಡನ ಎನಗೆ ತೋರಿದಡೆ
ನೀವೆನ್ನ ತಂದೆ ಎಂಬೆನಯ್ಯಾ, ಕಪಿಲಸಿದ್ಧಮಲ್ಲಿಕಾರ್ಜುನಾ (ವ. ೬೩೬)

ಇಲ್ಲೂ ಪರಮಾತ್ಮನ ಸಾಕ್ಷಾತ್ಕಾರಕ್ಕಾಗಿ ಜೀವ ಪಡುವ ಯಾತನೆಯನ್ನೇ ಕಾಣಬಹುದು. ನಲ್ಲನ ಆಗಮನದಿಂದ ಸಂಭ್ರಮಿಸುವ ಹೆಣ್ಣಿನ ಚಿತ್ರವನ್ನು ಸಿದ್ಧರಾಮ ಹೀಗೆ ಕೊಡುವನು :

ನೆನಹಿನ ನಲ್ಲನು ಮನೆಗೆ ಬಂದಡೆ ಮನದಲ್ಲಿ ಗುಡಿಗಟ್ಟುವೆನವ್ವಾ.
ತೋರಣ ತೋರಣ ಮಾಮರ ಮಾಮರ ತೋರಣಗಟ್ಟುವೆನವ್ವಾ.
ಕಾಮಸಂಗವಳಿದು ನಿಷ್ಕಾಮಸಂಗಕ್ಕೆಳಸುವೆನವ್ವಾ.
ಕಪಿಲಸಿದ್ಧಮಲ್ಲಿಕಾರ್ಜುನನ ಕೂಡುವೆನವ್ವಾ. (ವ. ೬೩೭)

ನಲ್ಲನ ಆಗಮನ ಬೇರೆ ಜೀವಕ್ಕೆ ಹೇಗೆ ಚೇತೋಹಾರಿಯಾಗಿದೆ ಎಂಬುದು ವಚನದ ಎರಡನೆಯ ಸಾಲಿನಲ್ಲಿ ವ್ಯಕ್ತವಾಗಿದೆ. ನಲ್ಲನನ್ನು ಸಂಭ್ರಮ ಸಡಗರಗಳಿಂದ ಇದಿರುಗೊಳ್ಳಲು 'ತೋರಣ ತೋರಣ ಮಾಮರ ಮಾಮರ ತೋರಣಗಟ್ಟುವೆನವ್ವಾ' ಎನ್ನುವ ನಲ್ಲೆಯ ನುಡಿಯಲ್ಲಿನ ಪುಟಿದೇಳುವ ಉತ್ಸಾಹ ಮಾತಿನಲ್ಲಿ ಧಾರಣಗೊಂಡಿದೆ. ನಲ್ಲನನ್ನು ಸೇರುವ ಕಾತುರದಲ್ಲಿ ಜೀವದ ಹಂಬಲವನ್ನು ನಾವು ಮನಗಾಣಬಹುದು. ಗಂಡನ ನಿರೀಕ್ಷೆಯಲ್ಲಿ ಅನ್ನ ಆಹಾರಗಳನ್ನು ಬಿಟ್ಟು ಬಡವಾದ, ನಿತ್ಯವೂ ಕಣ್ಣೀರಿಡುವ ಹೆಣ್ಣಿನ ಅಂತರಾಳದ ನೋವನ್ನು ಅವಳ ಕೋಪ-ತಾಪಗಳನ್ನು ಸಿದ್ಧರಾಮ ಹೀಗೆ ಹೇಳುವನು :

ಬಾರದೆ ಗಂಡ ಬಡವಾದೆ.
ಉಣ್ಣದೆ ಗಂಡ ಉಪವಾಸವಿದ್ದೆ.
ನನ್ನ ಕಣ್ಣನೀರು ನಿನ್ನ ಕಣ್ಣ ತಾಗಲೋ
ಕಪಿಲಸಿದ್ಧಮಲ್ಲಿನಾಥಾ. (ವ. ೬೩೮)

ಮನದೊಡೆಯನ ದರ್ಶನಕ್ಕಾಗಿ ಕಾದು, ಹಂಬಲಿಸಿ ನಿರಾಶೆಗೊಂಡ ನಲ್ಲೆಯ ತಪ್ತ ಮನದ ಸಿಡಿನುಡಿ ಮೇಲಣ ವಚನದ ಮೂರನೆಯ ಸಾಲಿನಲ್ಲಿದೆ. ದುಃಖ, ನಿರಾಶೆ, ಸಿಟ್ಟು, ನೋವು, ನಿಟ್ಟುಸಿರು ಎಲ್ಲವೂ ಆ ಸಾಲಿನಲ್ಲಿ ತುಂಬಿಕೊಂಡಿದೆ.

ಚೆಲುವಿನ ಪುತ್ಥಳಿಯಾದ ಮನದನ್ನನ ಚೆಲುವನ್ನು ಕಣ್ಣುಗಳಲ್ಲಿ ತುಂಬಿಕೊಳ್ಳು ವಂತೆ ನೋಡುತ್ತ ಮೈಮರೆಯುವ ಆಸೆ ಮನದನ್ನೆಯದು. ಸಿದ್ಧರಾಮ ಹೆಣ್ಣಾಗಿ

ಅಂಗ ಮಱೆವನ್ನಕ್ಕರ,
ಲಿಂಗಾ ನಿಮ್ಮ ಚೆಲುವ ಕಂಗಳು ತುಂಬಿ ನೋಡುತ್ತಲೆಂದಿಪ್ಪೆನೊ !
ಪರಿಪರಿಯ ನೋಟದಿಂದ ಹರುಷವನ್ನೆದಿಕೊಂಡು
ಪರಮೇಕಾಂತದೊಳೆಂದಿಪ್ಪೆನೊ ! (ವ. ೬೪೦)

ಎಂದು ಕನವರಿಸುವನು ; ಅಂತರಂಗದ ಕಟ್ಟಾಸೆಯನ್ನು ಹೀಗೆ ಬಾಯ್ಬಿಟ್ಟು ಹೇಳಿಕೊಳ್ಳುವನು. ಕಣ್ಣಮುಂದಿಂದ ನೀನು ಅಗಲಿದರೆ ನಾನು ಹೇಗೆ ಜೀವಿಸಲಿ ? ನನ್ನ ಅಳಲಿಕೆ ಬಳಲಿಕೆಯನ್ನು ನೋಡಿಯಾದರೂ ಕರುಣೆ ಬಂದು, 'ದುಃಖಿಸುವೆ ಯೇಕೆ ?' ಎಂದು ಹರಿವ ಕಣ್ಣೀರನ್ನೊರೆಸಿ ನನ್ನನ್ನು ಸೇರು ಎಂದು ನಲ್ಲೆಯು ತನ್ನ ನಲ್ಲನನ್ನ ಪ್ರಾರ್ಥಿಸುವಂತೆ ಪರಮಾತ್ಮನನ್ನು ಸಿದ್ಧರಾಮ ಪ್ರಾರ್ಥಿಸುವನು (ವ. ೬೪೧). ಈ ಮೊರೆಯಲ್ಲಿ ಚಿತ್ತಕಲಕುವ ಆರ್ತತೆಯಿದೆ. (ಸಿದ್ಧರಾಮ ವಿರಾಗಿಯಾದರೂ ಅವ ನಲ್ಲಿ ಹೆಣ್ಣಿನ ಅಂತರಂಗದ ದುಗುಡ ದುಮ್ಮಾನಗಳನ್ನು, ನೋವು ಸಂಕಟಗಳನ್ನು ಗ್ರಹಿಸಬಲ್ಲ ಮಾನವೀಯತೆಯಿದೆ.)

ಎಷ್ಟೇ ಬೇಡಿದರೂ ಮನಕರಗಿ ಕರುಣಿಸದ ಪರಮಾತ್ಮನ ನಿರ್ದಯಗುಣವನ್ನು ಆಕ್ಷೇಪಿಸುತ್ತ ಸಿದ್ಧರಾಮ, ತವರಿಗೆ ಹೋಗುವೆನೆಂದರೂ ಅಲ್ಲಿಗೆ ಬಾರೆನೆನ್ನುವ ನಲ್ಲನ ಕಟುಹೃದಯಕ್ಕೆ ಅದನ್ನು ಹೋಲಿಸುವನು :

ಗಂಡ ಬಾರೆನೆನ್ನ ತವರೂರಿಗೆ ಹೋಗುವೆನೆನಲು,
ನೋಡೆ ನೋಡೆಲಗವ್ವಾ.
ಬೇಟೆಯನಾಡುವ ನಾಯತಲೆಯ ಕೊಯ್ದಿಟ್ಟು,
ತಾಬೇಱೆ ಬೇಟೆಕಾಱನಾದ.
ನಮ್ಮ ಕಪಿಲಸಿದ್ಧಮಲ್ಲಿಕಾರ್ಜುನ ನೆಲೆಯಲ್ಲಿ ನಿಲವ ಕೊಂಡನು ;
ಹುಚ್ಚನ ಸಂಗ ನಿಶ್ಚಯವಾಯಿತ್ತು. (ವ. ೬೪೨)

ಮೇಲಿನ ವಚನದಲ್ಲಿ ನಲ್ಲನ ನಿರ್ದಯೆಯನ್ನು, ನಿಷ್ಕರುಣೆಯನ್ನು ತನ್ನ ಗೆಳತಿ ಯೋರ್ವಳಲ್ಲಿ ಹೇಳಿಕೊಂಡು ಮನಸ್ಸಿಗೆ ಸಮಾಧಾನ ತಂದುಕೊಳ್ಳುವ ಓರ್ವ ಹೆಣ್ಣಿನ ಚಿತ್ರವಿದೆ. ವಚನದ ಮೂರನೆಯ ಸಾಲು ನಲ್ಲನ ಕಟುಕ ಗುಣವನ್ನು ಹೇಳಿದರೆ, ನಾಲ್ಕನೆಯ ಸಾಲು ನಿಂತ ನೆಲೆಯಲ್ಲೇ ನಿರ್ಧಾರ ತಾಳುವ ನಲ್ಲನ ದುಡುಕನ್ನು ಹೇಳು ತ್ತದೆ. ನಿರ್ದಯೆ, ದುಡುಕುಗಳಿಂದ ಸಾರಾಸಾರ ವಿವೇಚನೆ ಮಾಡುವ ಶಕ್ತಿಯನ್ನೇ ಕಳೆದುಕೊಂಡ ನಲ್ಲನ ಸಂಗ ತನಗಾದದ್ದರ ಬಗೆಗೆ ಹೆಣ್ಣಿನ ಮನದಾಳದ ನೋವೂ

ವಚನದ ಕೊನೆಯಲ್ಲಿ ಬರುವ 'ಹುಚ್ಚನ ಸಂಗ ನಿಶ್ಚಯವಾಯಿತು' ಎಂಬ ಮಾತಿನಲ್ಲಿ ವ್ಯಕ್ತವಾಗುತ್ತದೆ.

ಕಣ್ಣಿನಲ್ಲಿ ಹೊಳೆದ ನಲ್ಲನ ಮೂರ್ತಿಯನ್ನು ಮನದಲ್ಲಿ ಹಿಡಿದು ನಿಲ್ಲಿಸುವಷ್ಟರಲ್ಲಿ ಮಿಂಚಿನಂತೆ ಮಾಯವಾಗಿ ಹೋದ ಪ್ರಿಯನ ಬಗೆಗೆ ನಲ್ಲೆಯೋರ್ವಳು ತನಗಾದ ಹತಾಶೆಯನ್ನು ಗೆಳತಿಯೋರ್ವಳಿಗೆ ಹೇಳಿಕೊಳ್ಳುವ ರೀತಿಯಲ್ಲಿ ಸಿದ್ಧರಾಮನು ತೋರಿ ಅಡಗುವ ತನ್ನ ಪ್ರಾಣದೊಡೆಯನನ್ನು ಕುರಿತು ಹೀಗೆ ಹೇಳುವನು :

ಕೇಳವ್ವಾ ಕೇಳವ್ವಾ ಕೆಳದಿ ಹೇಳುವೆ ನಿನಗೆ :
ಆಹಾ ! ಕಂಗಳಲ್ಲಿ ಕಾಬೆ, ಮತ್ತೆ ಕಾಣೆ !
ಮನದಲ್ಲಿ ಹಿಡಿವೆ, ಹಿಡಿದು ಮತ್ತೆ ಕಾಣೆನವ್ವಾ !
ಮಿಂಚಿನ ರವೆರವೆಯಂತೆ ತೋಱುವನಡಗುವ,
ನಮ್ಮ ಕಪಿಲಸಿದ್ಧಮಲ್ಲಿನಾಥದೇವನು ! (ವ. ೬೪೪)

ಪರಮಾತ್ಮನ ಕೃಪೆಗಾಗಿ ಹಂಬಲಿಸಿ ವಿಕಳಾವಸ್ಥೆಗೆ ಒಳಗಾಗಿ ಗಾಳಿ ಬೀಸಿದರೆ ಆದರ ಸಪ್ಪಳಕ್ಕೆ ಪರಮಾತ್ಮನೇ ಮೈದೋರಿದನೆಂದು ಬಗೆಯುವ ತನ್ನ ಚಿತ್ತಸ್ಥಿತಿಯನ್ನು ಸಿದ್ಧರಾಮನು ೬೪೫ನೇ ವಚನದಲ್ಲಿ ಹೇಳಿಕೊಂಡಿರುವನು. ದರುಶನಕ್ಕಾಗಿ ಮೊರೆಯಿಡುತ್ತಾ "ಅಯ್ಯಾ ನೀನೇಕೆ ಬರಲೊಲ್ಲೆ ಹೇಳಯ್ಯಾ. ನೀ ಬಾರೆಯೆಂದಾನು ಕಲ್ಮರನಾಗಿರ್ದೆನಯ್ಯಾ. ಅಯ್ಯಾ ನೀ ಬಾರಯ್ಯಾ, ಬಂದೆನ್ನ ಹೃದಯಸಿಂಹಾಸನವ ಮಾಡಿ ನಿಲ್ಲಯ್ಯಾ. ಅಹಾ ! ನೀ ಬಾರಾ" ಎಂದು ಕರುಳುಮಿಡಿಯುವಂತೆ ಪ್ರಾರ್ಥಿಸುವನು (ವ. ೬೪೬). ಮುಂದಣ ವಚನದಲ್ಲೂ ಇದೇ ಮೊರೆ ಕೇಳಿಬರುತ್ತದೆ. 'ನಿಮ್ಮ ಬರವ ಹಾರಿ ಕಣ್ಣು ಮುಚ್ಚದೆನ್ನ ಮನ ನೀ ಬಾರಯ್ಯಾ' ಎನ್ನುವಲ್ಲಿ (ವ.೬೪೭) ಆ ಜೀವದ ಮನಃಸ್ಥಿತಿ ಇನ್ನಷ್ಟು ನಿಚ್ಚಳವಾಗುತ್ತದೆ. ಪ್ರಾಣಕಾಂತನ ಕೃಪೆಗಾಗಿ ಕಾತುರದಿಂದ ಕಾದಿರುವ ನಲ್ಲೆಯ ಅಂತರಂಗದ ಪ್ರಾರ್ಥನೆ ಮತ್ತೆರಡು ವಚನಗಳಲ್ಲಿ ಕಾಣಬರುತ್ತದೆ (ವ. ೬೪೮, ೭೫೦). ನಲ್ಲನ ಆಗಮನಕ್ಕಾಗಿ ಕಣ್ಬೇಟಗೊಂಡ ನಲ್ಲೆ ಅವನ ಬರುವಿಕೆಗಾಗಿ ತನ್ನ ಮನವೆಂಬ ಮಂಚವನ್ನು ಅಣಿಗೊಳಿಸುವಳು ; ನಲ್ಲನ ಆಗಮನದ ನಿರೀಕ್ಷೆಯಲ್ಲಿ ಮನದ ಉದ್ವೇಗವನ್ನು ಹತ್ತಿಕ್ಕಿ 'ಚಿತ್ತ ಸುಯಿಧಾನಿ'ಯಾಗುವಳು. 'ಎಲೆ ಅಯ್ಯಾ, ನೀ ಬಂದು ವಿರತವಿಲ್ಲದೆ ಕೂಡಿ ನಿನ್ನವಳೆಂದೆನಿಸಾ' ಎಂದು ಮೊರೆಯಿಡುವಳು (ವ. ೬೪೮).

ತನ್ನ ಗಂಡನ ಗುಣವಿಶೇಷಗಳನ್ನು, ವಿನೋದ ಸ್ವಭಾವವನ್ನು, ವೈಚಿತ್ರ್ಯಗಳನ್ನು ತನ್ನ ಆತ್ಮೀಯ ಗೆಳತಿಗೆ ಏಕಾಂತದಲ್ಲಿ ಕಾದಲೆಯೋರ್ವಳು ಹೇಳಿಕೊಳ್ಳುವ ಧಾಟಿಯಲ್ಲಿ ಸಿದ್ಧರಾಮನು ತನ್ನ ಮನದೊಡೆಯನ ಸ್ವಭಾವ ವೈಚಿತ್ರ್ಯಗಳನ್ನು ಹೇಳುವನು :

ಎಲ್ಲರ ಪರಿಯಲ್ಲ, ಅವನ ಪರಿ ಹೊಸತು
ಕಾಲಾಜಿಜಲ್ಲಿ ನಡೆವ, ಕಿವಿಯಲ್ಲಿ ಉಂಬ,
ಮೂಗಿನಲ್ಲಿ ನೋಡುವ, ಬಾಯಲ್ಲಿ ಭಾವಿಸುವ,
ಕಣ್ಣನಲ್ಲಿ ಮೂರ್ಛೆಹೋಹ.
ಬಂದುದನತಿಗಳೆವ, ಬಾರದುದ ತನ್ನದೆಂಬ
ಇಂಥಾ ವಿನೋದ ವಿಚಿತ್ರನವ್ವಾ (ವ. ೮೦೮)
ಎಲ್ಲರ ಪರಿಯಲ್ಲ ಎಮ್ಮ ಗಂಡನ ಪರಿ.
ಒಬ್ಬರು ಬಲ್ಲುದ ತಾನಱಿಯ,
ತಾ ಬಲ್ಲುದನೊಬ್ಬರಱಿಯರು.
ತವಕ ಬಂದಲ್ಲಿ ಕೂಡುವ ಅಲ್ಲದಡೊಲ್ಲದ ಹಾಂಗಿರ್ಪ (ವ. ೮೮೯)

ಪತಿಯು ಒಲವೆ ತನ್ನೊಲವೆಂಬ ಸಮರಸಭಾವವನ್ನು ಸಿದ್ಧರಾಮ ಆದರ್ಶ ದಾಂಪತ್ಯವೊಂದರ ಮೂಲಕ ತಿಳಿಯಪಡಿಸುವನು :

ನೀ ಕೋಪನಾಗಿದ್ದಲ್ಲಿ ಕೋಪ ನೋಡಯ್ಯಾ.
ನೀನೊಲ್ಲದಿರ್ದಡೆ ಒಲ್ಲೆ ನೋಡಯ್ಯಾ.
ಎನ್ನಱಿವು ಮಱವೆ ಇಬ್ಬರಿಗೂ ಸಮ ನೋಡಯ್ಯಾ.
ಎನ್ನ ಬಯಕೆಯೊಳಗಣ ಬಯಕೆಯ ನಿಧಾನವು
ನೀನೆಂದು ಕಂಡ ಬಳಿಕ, ಬಯಸುವಾತ ನೀನೆ ಕಾಣಾ
ಕಪಿಲಸಿದ್ಧಮಲ್ಲಿನಾಥಯ್ಯಾ. (ವ. ೧೧೮೧)

ನಲ್ಲನ ನೋಟ, ಬೇಟ, ಕೂಟಗಳಲ್ಲಿನ ಸಮಸುಖ ಸಮರತಿಯಲ್ಲಿ ಏಕವಾಗುವ ಹೆಣ್ಣಿನ ಅಂತರಂಗದ ವಿಶಿಷ್ಟ ಅನುಭವ ತನ್ನ ಆತ್ಮೀಯರಲ್ಲಿ ಹೇಳಿಕೊಳ್ಳವಂತೆ, ಸಿದ್ಧರಾಮ ತನಗಾದ ಲಿಂಗಾಂಗ ಸಾಮರಸ್ಯದ ಅನುಭವವನ್ನು ಆತ್ಮೀಯವಾಗಿ ಹೀಗೆ ನಿರೂಪಿಸುವನು :

ನಲ್ಲನ ನೋಟದ ಬೇಟದ ಕೂಟದ ಪರಿಯ ನಾನೇನೆಂದು ಪೇಳುವೆ ?
ವಿಪರೀತ ಕೆಳದಿ.
ಕೂಟದ ಸುಖದಲ್ಲಿ ನೋಟ ಕಂಬೆಳಗಾದಡೆ, ಬೇಟ ಬೇಱುಂಟೆ ?
ಹೇಳು ಅವ್ವಾ.
ನೋಡಿದ ದೃಷ್ಟಿ ಎವೆ ಕಂದವೆ ? ಮೋಹದ ಪರಿ ಎಂತು ?
ಹೇಳಾ ಅವ್ವಾ.
ನೋಟ ಬೇಟ ಕೂಟ ಸಮಸುಖ ಸಮರತಿಯಾದಡೆ
ಕಪಿಲಸಿದ್ಧಮಲ್ಲಿನಾಥಯ್ಯ ಬೇಱಿಲ್ಲವವ್ವಾ. (ವ. ೧೧೮೨)

ಇಲ್ಲಿನ ಲೈಂಗಿಕ ಪ್ರತಿಮೆ ಅತ್ಯಂತ ಧ್ವನಿಪೂರ್ಣವಾಗಿದೆ. ಗಂಡನ ನೋಟ, ಬೇಟ, ಕೂಟಗಳಲ್ಲಿ ಹೆಣ್ಣು ಕರಗಿಹೋಗುವಂತೆ ಗಂಡೂ ಆ ಕ್ಷಣದಲ್ಲಿ ದಿವ್ಯಸುಖದಲ್ಲಿ ಲೀನನಾಗಿ ಹೋಗುವನು. ಎರಡು ದೇಹಗಳು ಒಂದಾಗುವ ಮಧುರ ಕ್ಷಣದ ದಿವ್ಯಾನುಭವವನ್ನು ಭಕ್ತನ ಅದ್ವೈತಸ್ಥಿತಿಯಲ್ಲಿನ ಮಧುರಾನುಭವಕ್ಕೆ ಸಮೀಕರಿಸಿ, ಮಾತಿಗೆ ಅತೀತವಾದ ಮಾನಸಲೋಕದ ಆನಂದದ ಸ್ಥಿತಿಯನ್ನು ಹೇಳಲಾಗಿದೆ. ಆ ಚಿತ್ತ ಸ್ಥಿತಿಯ ಚಿತ್ರ ಕೆಳಗಿನ ವಚನದಲ್ಲಿ ಇನ್ನಷ್ಟು ಸ್ಪಷ್ಟವಾಗಿ ಬಂದಿದೆ :

ಅಯ್ಯಾ, ಎನ್ನ ನಾ ಸಂತೈಸಿ ಸಂತೈಸಲಾಱೆನು.
ಆಹಾ ಅಯ್ಯಾ, ನಿನ್ನ ಕೂಟದ ಸವಿಗಳ ನೆನೆನೆನೆದು,
ಬೇಯದ ಬೇಗೆಯಲ್ಲಿ ಬೆಂದೆ ನೋಡಯ್ಯಾ.
ಅಯ್ಯಾ, ಎನಗಂತಿಂತೆಂದು ಹೇಳುವ ನಲ್ಲ
ಮಱೆಗೆ ಮಱೆಯದೆ ಕಿಚ್ಚನಿಕ್ಕಿಹೋದೆಯಲ್ಲಾ
ಎನ್ನ ಕಪಿಲಸಿದ್ಧಮಲ್ಲೇಶ್ವರಯ್ಯಾ ! (ವ. ೧೧೮೪)

ವಚನದ ಐದನೆಯ ಸಾಲು ಅರ್ಥಗರ್ಭಿತವಾಗಿದೆ. ಶಿವಜ್ಞಾನದ ಪ್ರಖರ ತೇಜದಲ್ಲಿ ಉರಿಯುಂಡ ಕರ್ಪುರದಂತೆ ಕರಗಿ ತಾನು ಬಿಜ್ಯೋತಿಯಲ್ಲಿ ಲಯವಾಗಿ ಹೋದುದನ್ನು ಸಾಂಕೇತಿಕವಾಗಿ ಸಿದ್ಧರಾಮ ಇಲ್ಲಿ ಹೇಳುತ್ತಿರುವನು. ಹಾಗೆಯೇ, ತನಗೆ ತಿಳಿಯದಂತೆ ಆ ಅದ್ವೈತಸುಖ ಪ್ರಾಪ್ತಿಯಾಗುವಂತೆ ಮಾಡಿದ ತನ್ನ ನಲ್ಲನ ಅಪಾರ ಕರುಣೆಯ ಬಗೆಗೆ ಮೆಚ್ಚುಗೆಯಾಡಿರುವನು. ಇಲ್ಲಿನ 'ಕಿಚ್ಚನಿಕ್ಕಿಹೋದೆ' ಎಂಬ ಮಾತಿನಲ್ಲಿ ಕಂಡುಬರುವ ಧ್ವನಿರಮ್ಯತೆಯನ್ನು ಗಮನಿಸಬೇಕು. ಬೆಂಕಿಗೆ ಸುಟ್ಟು ಭಸ್ಮಮಾಡುವ ಗುಣವಿದೆ. ಆದರೆ ಇಲ್ಲಿ ಕಪಿಲಸಿದ್ಧಮಲ್ಲೇಶ್ವರನು ಇಕ್ಕಿ ಹೋದ 'ಕಿಚ್ಚು' ಸಿದ್ಧರಾಮನನ್ನು ದ್ವೈತದಿಂದ ಅದ್ವೈತದ ನೆಲೆಗೆ ಕೊಂಡೊಯ್ಯುದ್ದ ಉಪಕರಿಸಿತು.

ಸಿದ್ಧರಾಮ ಒಮ್ಮೆಗೇ ಸಿದ್ಧಸ್ಥಿತಿಯನ್ನು ಮುಟ್ಟಿದವನಲ್ಲ. ಮನಸ್ಸನ್ನು ಕಟ್ಟಿ ನಿಲ್ಲಿಸುವ ಪ್ರಯತ್ನದಲ್ಲಿ ಅವನೂ ಹಲಕಾಲ ಸಾಧನೆ ಮಾಡಿರುವನು. ಶಿಲೆಯ ಮೇಲೆ ಮಲಗಿ, ವಾಯುವನ್ನು ಭಕ್ಷಿಸಿ ದಿನಗಳನ್ನು ಕಳೆದಿರುವನು. ಆ ಕಠಿಣ ಆಚರಣೆಗಳಿಂದ ಮನಸ್ಸಿನ ಮೇಲೆ ಅವನು ಹತೋಟಿಯನ್ನು ಸಾಧಿಸಿದಂತಿದೆ. ಶಿಲೆಯ ಮೇಲೆ ಸೈವೆಟಿಗಾಗಿ ತಲೆಯ ಬಿಟ್ಟಿದ್ದ ಪರಿಯ ; ವಾಯುಭಕ್ಷಕಳಾಗಿದ್ದ ಪರಿಗಳ ದೇವರ ದೇವನಾದ ಕಪಿಲಸಿದ್ಧಮಲ್ಲಿನಾಥನು ಕಂಡು ತನ್ನ ಮೇಲೆ ಕರುಣಿಸಿ ತನ್ನ ಗಂಡನಾದನು ಎಂದು ಒಂದು ವಚನದಲ್ಲಿ (ವ. ೧೧೮೭) ಹೇಳಿಕೊಂಡಿರುವನು. ತನ್ನ ಅಂತರಂಗದಲ್ಲಿರುವ ವಿಷಯವಾಸನೆಗಳಿಗೆ ಬೇಗ ಬೇಗ ಹೊರಟು ಹೋಗುವಂತೆ ಸಿದ್ಧರಾಮ ಹೇಳುತ್ತ "ಎಮ್ಮ ನಲ್ಲ ಎಮ್ಮ ಮನೆಯೊಳಗೆ ಏಕಾಂತಂಬೊಕ್ಕಹನು,

ಬೇಗ ಬೇಗ ಹೊಱಮಂಡಿರಣ್ಣಗಳಿರಾ. ನೀವಿದ್ದಡೆ ಮೃತ್ಯುಬಪ್ಪುದು ; ಆತ ಮನೆಯೊಳಗೊಬ್ಬರಿದ್ದಡೂ ಸೈರಿಸ ಕಪಿಲಸಿದ್ಧಮಲ್ಲಿಕಾರ್ಜುನನೆಂಬ ನಲ್ಲನು" (ವ. ೧೧೯೦) ಎನ್ನುವನು. ತನ್ನ ಮಾವ ಮನೆಗೆ ಬಂದಾಗ ಹೇಗೆ ಆದರಿಸುವುದು, ಹೇಗೆ ಮಾತನಾಡಿಸುವುದೆಂಬುದು ತಿಳಿಯದೆ ತನ್ನ ಗಂಡನನ್ನೇ ಆ ಕೆಲಸ ಮಾಡಲು ಒತ್ತಾಯಿಸಿ ಕಳುಹಿಸುವ ಮುಗ್ಧಯೋರ್ವಳ ಅಪೂರ್ವ ಚಿತ್ರವನ್ನು ಸಿದ್ಧರಾಮ ಕೊಟ್ಟಿರುವನು :

ಏನೋ ಏನೋ ಗಂಡಾ,
ನಿಮ್ಮ ತಂದೆ ಬಂದೈದಾನೆ ; ನಾನೇನುವನಱಿಯೆನೈ.
ನೀನೆ ನಿಮ್ಮ ತಂದೆಯ ಸಂತೈಸಿ,
ಎನಗವರ ಕರುಣವ ಪಾಲಿಸಯ್ಯಾ, ಕಪಿಲಸಿದ್ಧಮಲ್ಲಿನಾಥಯ್ಯಾ
(ವ. ೧೧೯೨)

ಈ ವಚನದ ಪ್ರಾರಂಭದ ಸಂಬೋಧನೆಯೇ ಆಕರ್ಷಕವಾಗಿದೆ. ಗಂಡ–ಹೆಂಡಿರ ನಡುವಣ ಆತ್ಮೀಯತೆಯ ಏಕವಚನದ ಪ್ರಯೋಗದಲ್ಲಿ ವ್ಯಕ್ತವಾಗುತ್ತದೆ. ಕಪಿಲಸಿದ್ಧಮಲ್ಲಿನಾಥನ ನಲ್ಲೆಯಾಗಿ, ಮನೆವಾಳ್ತಿಯಲ್ಲಿ ಏನೇನೂ ತಿಳಿಯದ ತನ್ನ ಮುಗ್ಧಸ್ಥಿತಿಯನ್ನು ಸಿದ್ಧರಾಮ ತಿಳಿಸಿರುವ ರೀತಿ ಇಲ್ಲಿ ಅಪೂರ್ವದ್ದಾಗಿದೆ.

ಸಿದ್ಧರಾಮನಿಗೆ ತನ್ನ ಮನದೊಡೆಯನನ್ನು ಕಣ್ಣುಮುಚ್ಚಿ ಧ್ಯಾನಿಸಿ ಒಳಗಣ್ಣನ್ನು ತೆರೆದು ಅವನ ಆಗಮನವನ್ನು ಕಿವಿಗೊಟ್ಟು ಕೇಳುತ್ತಲಿರಲು ಮನದೊಡೆಯನ ಸಾಕ್ಷಾತ್ಕಾರವಾಯಿತು. ಆ ಪರಮನ ಪ್ರತಿಬಿಂಬ ಮನದಲ್ಲಿ ಮಿಂಚಲು ಅವನನ್ನು ಕಣ್ತುಂಬ ನೋಡಿ, ಕರತುಂಬಿ ಹಿಡಿದು ಮನಮುಟ್ಟಿ ಅವನನ್ನು ಕೂಡುವನು. ಈ ಅನುಭವವನ್ನು ಎಷ್ಟು ಪರಿಯಲ್ಲಿ ಹೇಳಿದರೂ ಅವನಿಗೆ ತೃಪ್ತಿಯಾಗದು. ಈ ತೀವ್ರವಾದ ಅನುಭವ ವಚನ ೧೧೯೫ರಲ್ಲಿ ಸೊಗಸಾಗಿ ದಾಖಲುಗೊಂಡಿದೆ.

ಸಿದ್ಧರಾಮ ಹೆಣ್ಣಾಗಿ ದಾಂಪತ್ಯ ಜೀವನದ ಎಲ್ಲ ಅನುಭವಗಳಿಗೆ, ಮಾನಸಿಕ ಸಂವೇದನೆಗಳಿಗೆ ಸ್ಪಂದಿಸುತ್ತ ಲೌಕಿಕದ ನೆಲೆಯಿಂದ ಅಲೌಕಿಕದ ನೆಲೆಗೆ ಅವೆಲ್ಲವನ್ನು ಏರಿಸುವನು. ಅವನಲ್ಲಿ ಎಲ್ಲೂ ಲೈಂಗಿಕಕ್ರಿಯೆ ವಾಚ್ಯವಾಗುವುದಿಲ್ಲ ; ಮಾತು ಸಂಯಮದ ಗೆರೆ ದಾಟುವುದಿಲ್ಲ. ಇದು ಅವನ ವಚನಗಳ ದೊಡ್ಡಗುಣ. ಸತಿ–ಪತಿ ಭಾವದಲ್ಲಿ ಅವನು ಭೋಗವನ್ನು ಯೋಗವನ್ನಾಗಿಸಿದ ಮಾಂತ್ರಿಕ. ಅವನು ಎಂದೂ ಹೆಣ್ಣನ್ನಾಗಲೀ ದಾಂಪತ್ಯ ಜೀವನವನ್ನಾಗಲೀ ತುಚ್ಛವೆಂದು ಭಾವಿಸಿದವನಲ್ಲ. ಅವನು 'ಹೆಣ್ಣು ಮಾಯೆಯಲ್ಲ, ಪ್ರತ್ಯಕ್ಷ ಕಪಿಲಸಿದ್ಧಮಲ್ಲಿಕಾರ್ಜುನ' ಎಂದು ಹೇಳಿದ ಮಹಾನುಭಾವ. ಆದುದರಿಂದಲೇ ಅವನು ತನ್ನ ಅನುಭವ ನಿವೇದನೆಗೆ 'ಶರಣಸತಿ ಲಿಂಗಪತಿ' ಭಾವವನ್ನು ಮಾಧ್ಯಮವಾಗಿ ಬಳಸಿದುದು. ಸಿದ್ಧರಾಮನ ವಚನಗಳಲ್ಲಿ ವ್ಯಕ್ತಗೊಂಡಿರುವ ಸತಿ–ಪತಿ ಭಾವ ಹಾಗೂ ಯೌಗಿಕ ಅನುಭವಗಳು ವಚನಸಾಹಿತ್ಯ

ದಲ್ಲಿ ಬಹಳ ಮಹತ್ತ್ವದ ಸ್ಥಾನ ಪಡೆದಿವೆ. ಸಿದ್ಧರಾಮನು ಶ್ರೇಷ್ಠ 'ಶಿವಯೋಗಿ'. ಅವನು ತನ್ನ ಅನುಭವಗಳಿಗೆ ಶಾಬ್ದಿಕವಾಗಿ ಜೀವತುಂಬಲು ತನ್ನ ವಚನಗಳಲ್ಲಿ ಹವಣಿಸಿರುವನು. ವಚನ ಸಾಹಿತ್ಯದ ಅಭ್ಯಾಸಿಗಳ ದೃಷ್ಟಿ ಇವನ ವಚನಗಳ ಕಡೆಗೆ ವಿಶೇಷವಾಗಿ ಹರಿದಿಲ್ಲ.

ಸಿದ್ಧರಾಮನಂತೆ ಉರಿಲಿಂಗದೇವನೂ ಶ್ರೇಷ್ಠ ಅನುಭಾವಿ ; ಸತಿ–ಪತಿ ಭಾವದ ಸಾಧಕ. ಇವನ ವಚನಗಳಲ್ಲಿ ಬಹುಪಾಲು ಶರಣಸತಿ–ಲಿಂಗಪತಿ ಭಾವದ ಅನುಸಂಧಾನವನ್ನು ಕುರಿತದ್ದೇ ಆಗಿದೆ. ಸರಳ ಭಾಷೆಯಲ್ಲಿ. ಹೆಣ್ಣೊಬ್ಬಳು ತನ್ನ ಮಧುರ ಭಾವಗಳನ್ನು ಆಪ್ತ ಗೆಳತಿಯೋರ್ವಳಿಗೆ ನಿರೂಪಿಸುವ ಧಾಟಿಯಲ್ಲಿ ವಚನಗಳ ರಚನೆಯಿದೆ. ನಲ್ಲನೊಡನೆ ಮುನಿಸುಗೊಂಡು ಅಡಗಲು ಹೊರಟ ನಲ್ಲೆಗೆ ಎಲ್ಲೆಲ್ಲೂ ತನ್ನ ನಲ್ಲನ ರೂಪೇ ಕಾಣಬರುವುದು. ಆಗ ಅವಳ ಮನ ನುಡಿಯುತ್ತದೆ : 'ನಲ್ಲ ನೀನಿಲ್ಲದೆಡೆಯಿಲ್ಲ. ಅಡಗಲಿಕಿಂಬಿಲ್ಲಾಗಿ ಮುನಿದು ನಾನೇಗುವೆನು ? ಶರಣಾಗತಿ ಹೋಗುವೆನು' (ವ. ೧೫೫೨).6 ನಲ್ಲನೇ ನಲ್ಲೆಯ ಮೇಲೆ ಮುನಿಸುಗೊಂಡು ಹೋದಾಗ 'ಎನ್ನ ನಲ್ಲನೆನ್ನನೊಲ್ಲದಿರ್ದಡೆ ನಾ ಎಲ್ಲಿ ಅಱಸುವೆನವ್ವಾ ? ಗಂಗೆಯ ನೋಸೆನು, ಗೌರಿಯ ನೋನೆನು. ಎಲ್ಲಿ ಅಱಸುವೆನವ್ವಾ....' (ವ. ೧೫೬೨) ಎಂಬ ಕಾತುರ ವ್ಯಕ್ತಗೊಳ್ಳುತ್ತದೆ. ತನ್ನ ಇನಿಯನಿಗೆ ಶರಣಾಗುವುದರಲ್ಲಿ ಧನ್ಯತೆಯಿದೆ. ತನ್ನ ನಲ್ಲನು ಕೊಡುವ ಅಪೂರ್ವ ಸುಖವನ್ನು ಒಂದು ವಚನದಲ್ಲಿ ಉರಿಲಿಂಗದೇವ ಹೇಳುತ್ತಾ :

ಇಂಬಿನ ಚುಂಬನ ಅಮೃತಾಹಾರ, ಆಲಿಂಗನವೆ ಆಭರಣ,
ಸೋಂಕೆ ವಸ್ತ್ರ, ನೋಟವೆ ಕೂಟ, ಒಡನಾಟವೆ ಅಷ್ಟಭೋಗವೆನಗೆ,
ಉರಿಲಿಂಗದೇವನ ಕೂಟವೆ ಪರಾಪರ ವಾಙ್ಮನಾತೀತ ಪರಮಸುಖ.
(ವ. ೧೫೫೬)

ಎನ್ನುವನು. ತನ್ನ ನಲ್ಲನನ್ನು 'ಕಾಮನ ಕೊಂದು ಪಟ್ಟಕ್ಕೆ ನಿಂದ ಕಾಮರಾಜರಾಜನು, ರಾಜಾಧಿರಾಜ, ಗಂಡರನೆಲ್ಲರ ಹೆಂಡಿರ ಮಾಡಿ ನೆರೆವ ವೈಶಿಕ ಕಾಮು'ನೆಂದು ವಿಶೇಷಿಸಿ ಕರೆದು 'ಇಂತಪ್ಪ ಕಾಮಿ ಎನಗತಿ ಕಾಮಿಸಿ ನೆರೆದು ಕಾಮಸಿದ್ಧಿಯನೀವನು ಉರಿಲಿಂಗದೇವನು' ಎನ್ನುವನು (ವ. ೧೫೫೭). ನಲ್ಲನನ್ನು ನೆರೆಯಲು ಹೊರಟ ಹೆಣ್ಣಿನ ಮೊದಲ ಅನುಭವವನ್ನು ಉರಿಲಿಂಗದೇವ ಹೀಗೆ ಹೇಳುವನು :

ನಲ್ಲನ ಕೂಡೆಹೆನೆಂದು ನೆನೆವನ್ನಬರ ತವಕದಿಂದ ಮೇಲುವಾಯ್ದೆ
ನೋಡವ್ವಾ,
ಮನದೊಳಗೆ ಮನವಾಗಿ, ಪ್ರಾಣದೊಳಗೆ ಪ್ರಾಣವಾಗಿ

---

6. ಇನ್ನು ಮುಂದೆ ಕೊಡಲಾಗಿರುವ ವಚನ ಸಂಖ್ಯೆ 'ಸಕಲ ಪುರಾತನರ ವಚನಗಳು–೧' ರಿಂದ ಉದ್ಧೃತವಾದುದು.

ಕಾಯದೊಳಗೆ ಕಾಯವಾಗಿ,
ತವಕಕ್ಕೆ ತವಕ ಮಿಗೆ ಮೇಲುವರಿದು ಕೂಡಿದಂತೆ ಕೂಡುವೆ,
ಉರಿಲಿಂಗದೇವನ. (ವ. ೧೫೬೬)

ಇನ್ನೊಂದು ವಚನದಲ್ಲಿ ಪ್ರಿಯನ ಸಮಾಗಮದಲ್ಲಿ ಮೈಮರೆಯುವ ಮುಗ್ಧ ಹೆಣ್ಣಿನ ಮಾನಸಿಕ ಸ್ಥಿತಿಯನ್ನು

ನಲ್ಲನ ಕೂಡುವ ಭರದಲ್ಲಿ ಎನ್ನುವನಿದಿರುವನೇನೆಂದಱಿಯೆನು
ನಲ್ಲನ ಕೂಡುವಾಗಳೂ ಎನ್ನುವ ನಲ್ಲನನೇ ನೆಂದಱಿಯೆನು.
ಉರಿಲಿಂಗದೇವನ ಕೂಡಿದ ಬಳಿಕ
ನಾನೊ ತಾನೊ ಏನೆಂದಱಿಯೆನು. (ವ. ೧೫೬೫)

ಎಂದು ನಿಸ್ಸಂಕೋಚದಿಂದ ಹೇಳುವನು. 'ನಲ್ಲನ ಬೇಟದ ಕೂಟದ ಸುಖವ ನೇನೆಂದು ಬಣ್ಣಿಪೆ, ಮಹಾಸುಖವ? ನಲ್ಲನ ನೋಟದ ಕೂಟದನುವನೇನೆಂದು–ಪಮಿಸುವೆ, ಮಹಾಘನವ? ನಾನು ತಾನೆಂದು ವಿವರಿಸಬಾರದಂತೆ ನೆರೆದನು ನೋಡಾ, ಉರಿಲಿಂಗದೇವನು' (ವ. ೧೫೫೮) ಎಂದು ಒಂದೆಡೆ ಹೇಳಿದರೆ, ಮತ್ತೊಂದು ವಚನದಲ್ಲಿ 'ಉರಿಲಿಂಗದೇವನನಪ್ಪಿ ಸೊಪ್ಪಾದ ಹಿಪ್ಪೆ'ಯಾದೆ ಎಂದು (ವ. ೧೫೬೭) ಹೇಳಿಕೊಳ್ಳುವನು. "ಎಮ್ಮ ನಲ್ಲನ ಕೂಡಿದ ಕೂಟವ ಇದಿರಿಗೆ ಹೇಳ ಬಾರದವ್ವಾ. ನೀವೆಲ್ಲಾ ನಿಮ್ಮ ನಲ್ಲನ ಕೂಡಿದ ಸುಖವ ಬಲ್ಲಂತೆ ಹೇಳಿ ಉರಿಲಿಂಗ ದೇವ ಬಂದು ನಿಱಿಯ ಸೆಱಗ ಸಡಿಸಲೊಡನೆ ನಾನೊ ತಾನೊ ಏನೆಂದಱಿಯೆನು" (ವ. ೧೫೭೮) ಎಂದು ಆ ಸುಖದ ಉತ್ಕಟಸ್ಥಿತಿಯನ್ನು ಮಾತಿನಲ್ಲಿ ಮೂಡಿಸುವನು. ಹೆಣ್ಣು–ಗಂಡಿನ ಲೈಂಗಿಕ ಕ್ರಿಯೆಗಳ ನಿರೂಪಣೆ ಮಾಡುತ್ತ ಮಾಡುತ್ತ ದ್ವೈತ–ಅದ್ವೈತದ ಚಿತ್ತಸ್ಥಿತಿಗಳಿಗೆ ಅವನ್ನು ಹೊರಳಿಸುವನು. ಈ ಅಪೂರ್ವಸಿದ್ಧಿ ಇವನ ವಚನಗಳ ಕಾವ್ಯಗುಣವನ್ನು ಮೇಲ್ತರದ್ದಾಗಿಸಿದೆ. "ಅತ್ಯಂತ ರಾಗೋದ್ರಿಕ್ತ ಭಾಷೆಯನ್ನು ಬಳಸಿರುವ ಉರಿಲಿಂಗದೇವ ತನ್ನ ಬಗೆಬಗೆಯ ಅನುಭವಗಳಿಗೆ ತನ್ನ ಕೃತಿಗಳಲ್ಲಿ ಅಭಿವ್ಯಕ್ತಿ ನೀಡಿದ್ದಾನೆ."7

'ಅತಿಕಾಮಿ ವಿಪರೀತನು ಉರಿಲಿಂಗದೇವನು' 'ಒಬ್ಬನೆ ಗರುವನಿವ, ಒಬ್ಬನೆ ಚೆಲುವನಿವ' (ವ. ೧೫೭೨, ೧೫೭೧) ಎಂದು ಹೇಳುವ ಉರಿಲಿಂಗದೇವ 'ಎನ್ನ ಮನವ ನಂಬದೆ ಮೈಗಾಹಾಗಿ ಇರಿಸಿದನು, ಉರಿಲಿಂಗದೇವನು ತಾ ಬಂದು ನೆರೆವನ್ನ ಬರ' (ವ. ೧೫೬೧) ಎಂದು ತನ್ನ ಅತಿಕಾಮಿ ನಲ್ಲನ ಸಂಶಯುಗ್ರಸ್ತ ವಿಚಿತ್ರ ವರ್ತನೆಯನ್ನು ನಿರೂಪಿಸುವನು. "ಇನಿಯನೆನಗೆ ನೀನು ; ಇನ್ನೇನನೊಂದ ನಾನಱಿಯೆ. ನೀನೆ

7. ಡಾ॥ ಎಂ. ಚಿದಾನಂದಮೂರ್ತಿ : ವಚನ ಸಾಹಿತ್ಯ, ಪು. ೧೧೧

ನುಡಿಸಲು ನುಡಿವೆನು ; ನಡೆಸಲು ನಡೆವೆನು, ನೀನಲ್ಲದರಿಯೆನು, ನಲ್ಲ ನೀ ಕೇಳಾ. ನೀನೇ ಗತಿ ನೀನೇ ಮತಿ ನಿನ್ನಾಣೆಯಯ್ಯಾ" (ವ.೧೫೬೦) ಎಂದು ನಲ್ಲೆಯಾಗಿ ಸರ್ವ ಸಮರ್ಪಣಭಾವವನ್ನು ತನ್ನ ನಲ್ಲನಲ್ಲಿ ವ್ಯಕ್ತಪಡಿಸುವನು. ಈ ಸರ್ವಸಮರ್ಪಣ ಭಾವ ನೆಲೆಗೊಂಡ ಉರಿಲಿಂಗದೇವನಲ್ಲಿ ತನ್ನ ನಲ್ಲನನ್ನು ಅಗಲಲಾಗದ ಭಾವಮೈತ್ರಿ ತೀವ್ರವಾಗುತ್ತದೆ; ನಲ್ಲನ ನಾಮವೇ ಮಂತ್ರ, ಯಂತ್ರ, ತಂತ್ರ, ವಶ್ಯವಾಗಿಬಿಡುತ್ತದೆ. ಪಂಚೇಂದ್ರಿಯಗಳನ್ನೂ ಪತಿ ಉರಿಲಿಂಗದೇವ ಆವರಿಸಿಬಿಡುವಷ್ಟು ಅನುರಕ್ತಿ ತೀವ್ರ ವಾಗುತ್ತದೆ :

ನಲ್ಲನ ರೂಪೆನ್ನ ನೇತ್ರವ ತುಂಬಿತ್ತು.
ನಲ್ಲನ ನುಡಿಯೆನ್ನ ಶ್ರೋತ್ರವ ತುಂಬಿತ್ತು.
ನಲ್ಲನ ಸುಗಂಧವೆನ್ನ ಘ್ರಾಣವ ತುಂಬಿತ್ತು.
ನಲ್ಲನ ಚುಂಬನವೆನ್ನ ಜಿಹ್ವೆಯ ತುಂಬಿತ್ತು.
ನಲ್ಲನ ಪ್ರೇಮವೆನ್ನ ಮನವ ತುಂಬಿತ್ತು.
ನಲ್ಲನ ಆಲಿಂಗನವೆನ್ನ ಅಂತರಂಗ ಬಹಿರಂಗದಲ್ಲಿ,
ಕೂಡಿ ಸುಖಿಯಾದೆ ಉರಿಲಿಂಗದೇವನ. (ವ. ೧೫೭೭)

ಉರಿಲಿಂಗದೇವನ ವಚನಗಳಲ್ಲಿ ಪರಮಾತ್ಮನ ಅನುಸಂಧಾನ ತೀವ್ರಸ್ವರೂಪದಲ್ಲಿ ವ್ಯಕ್ತಗೊಂಡಿದ್ದು, ಉಜ್ವಲವಾದ ಭಕ್ತಿಭಾವ ಲೈಂಗಿಕ ಪ್ರತಿಮೆಗಳ ಮೂಲಕ ನಮ್ಮ ಭಾವಪ್ರಪಂಚವನ್ನು ಆವರಿಸುತ್ತದೆ. ಉರಿಲಿಂಗದೇವನಂತೆ ಗಜೇಶ ಮಸಣಯ್ಯನೂ ಸತಿ-ಪತಿ ಭಾವದ ವಚನಗಳನ್ನು ಬರೆದಿದ್ದರೂ ನಿರೂಪಣಾವಿಧಾನದಲ್ಲಿ ಇಬ್ಬರೂ ಬೇರೆಯಾಗುವರು. ಉರಿಲಿಂಗದೇವ ಸತಿಯಾಗಿ ತನ್ನ ಭಾವನೆಗಳನ್ನು ಶೃಂಗಾರದ ಉತ್ಕಟಸ್ಥಿತಿಯ ಪರಿನಿವೇಶನದಲ್ಲಿ ರಾಗೋದ್ರಿಕ್ತ ಭಾಷೆಯ ಮೂಲಕ ಅಭಿವ್ಯಕ್ತ ಗೊಳಿಸಿದರೆ, ಗಜೇಶ ಮಸಣಯ್ಯನು ಸರಳವಾಗಿ, ಪ್ರತಿಮಾ ವಿಧಾನದ ಮೂಲಕ, ಹೇಳ ಬೇಕಾದುದನ್ನು ಸೂಕ್ಷ್ಮವಾಗಿ ತಿಳಿಯಪಡಿಸುವನು. ಅವನು ತನ್ನ ಅನಿಸಿಕೆಗಳನ್ನು ಪ್ರಾಮಾಣಿಕವಾಗಿ, ಅರ್ಥವತ್ತಾಗಿ ನಿರೂಪಿಸಲು ಸುಕುಮಾರ ಪ್ರತಿಮೆಗಳನ್ನು ಯಥೇಚ್ಛವಾಗಿ ಬಳಸಿಕೊಳ್ಳುವನು. ವಚನಗಳಲ್ಲಿ ಜೀವತುಂಬಿ ನಿಲ್ಲುವ ಅವನ ಪ್ರತಿಮೆ ಗಳು ವಚನ ಸಾಹಿತ್ಯದಲ್ಲೇ ಅವನನ್ನು ವಿಶಿಷ್ಟ ವ್ಯಕ್ತಿಯನ್ನಾಗಿಸಿದೆ. ಅವನು ಏನನ್ನೇ ಹೇಳಲಿ ಪ್ರತಿಮೆಗಳ ಮೂಲಕವೇ ತಿಳಿಯಪಡಿಸುವನು ; ಸಹೃದಯರೊಂದಿಗೆ ಭಾವ ಸಂವಾದವನ್ನು ಪ್ರತಿಮೆಗಳ ಮೂಲಕವೇ ಮಾಡುವನು. ನಲ್ಲನ ಅಗಲಿಕೆ ಆದರಿಂದಾದ ವಿರಹ, ನೋವು, ನಲ್ಲನ ಸಾಮಿಪ್ಯದಲ್ಲಿ ಜೀವಹೊಂದುವ ನಲಿವು, ಸುಖ ಹೀಗೆ ಅಂತರಂಗದ ಭಾವನೆಗಳ ಸೂಕ್ಷ್ಮ ಚಿತ್ರಗಳನ್ನು ಅರ್ಥವತ್ತಾದ ಪ್ರತಿಮೆಗಳ ಮೂಲಕ ಗಜೇಶ ಮಸಣಯ್ಯ ಬಿಡಿಸುವನು.

ನಲ್ಲನಿಲ್ಲದ ಬಾಳು ನಲ್ಲೆಗೆ ಅಸಹನೀಯವಾಗುವುದು. ಅವನನ್ನು ಅಗಲುವುದಕ್ಕಿಂತ ಸಾವುದೇ ಸುಖ ; 'ಅಪ್ಪಿನ ಸೋಂಕಿನ ಸುಖವನಗಲುವ ಮನಕ್ಕಿಂತ ಬಂಜೆಯಾಗಿಪ್ಪುದು ಕರ ಸುಖ' (ವ. ೪೯೭)ವೆನ್ನುವ ತೀರ್ಮಾನಕ್ಕೆ ನಲ್ಲೆಯು ಬರುವಳು. ಮಹಾಲಿಂಗ ಗಜೇಶ್ವರನ ನಲ್ಲೆಯಾಗಿ ಮಸಣಯ್ಯನೂ ಅದೇ ತೀರ್ಮಾನಕ್ಕೆ ಬರುವನು :

> ಕೋಗಿಲೆಗಳು ಹುಳುವಟ್ಟಿ ಹೋದ ಬನದಂತೆ ಆದೆ ನೋಡವ್ವಾ.
> ರಾಮರಾಡಿದ ಹೊಳಲಿನಂತೆ ಆದೆ ನೋಡವ್ವಾ.
> ಜವ್ವನೆಗಳು ಬಳಲ್ದ ಸ್ತ್ರೀಯರ ಮುಖಕಾಂತಿಯಂತೆ ಆದೆ ನೋಡವ್ವಾ.
> ಪರಿಮಳವಿಲ್ಲದ ಪುಷ್ಪದಂತೆ ಆದೆ ನೋಡವ್ವಾ.
> ಚಂದ್ರಮನಿಲ್ಲದ ನಕ್ಷತ್ರಗಳಂತೆ ಆದೆ ನೋಡವ್ವಾ.
> ಮಹಾಲಿಂಗ ಗಜೇಶ್ವರನನಗಲುವದಱಿಂದ ಸಾವುದು ಸುಖ ನೋಡವ್ವಾ.
> (ವ. ೫೨೦)[೮]

ಮಹಾಲಿಂಗ ಗಜೇಶ್ವರನ ಅಗಲಿಕೆಯ ವಿರಹದಿಂದ ದಶಾವಸ್ಥೆಗೆ ಒಳಗಾದ ಚಿತ್ತಸ್ಥಿತಿಯನ್ನು ಕೆಳಗಿನ ವಚನದಲ್ಲಿ ಕೊಡಲಾಗಿದೆ :

> ಆಲಿಕಲ್ಲ ಮರದಡಿಯಲಿಹ ಮಘಮಘಿಸುವ ಗಿಳಿವಿಂಡು,
> ಉರವಣಿಸುವ ಪಕ್ಷಿಗಳು, ಸರವಗೈವ ಕೋಗಿಲೆ, ಗಗನದ ಚಂದ್ರಮ ;
> ಅಗಲಲಾರೆನು ಸಖಿಯೆ ಬೆಳುದಿಂಗಳು ಬಿಸಿಲಾದವೆ ?
> ಗಗನದ ದಶರಥನ ಬೀಡಿನಲ್ಲಿ ಕಾಮಿನಿ ಕೈವೋದಳೆ ?
> ದಶಾವಸ್ಥೆಗೊಂಡೆನು ಮಹಾಲಿಂಗ ಗಜೇಶ್ವರನುಳಿದಡೆ. (ವ. ೫೨೪)

ತಣ್ಣನೆಯ ನೆಳಲು, ಮಧುರವಾಗಿ ನುಡಿವ ಗಿಳಿವಿಂಡು. ಕೂಜನಗೈವ ಕೋಗಿಲೆ, ಆಕಾಶದಲ್ಲಿನ ಪೂರ್ಣಚಂದ್ರ ಇವೆಲ್ಲವೂ ನಲ್ಲೆಯ ವಿರಹವನ್ನು ಇನ್ನಷ್ಟು ಹೆಚ್ಚಿಸಿವೆ. 'ಅಗಲಲಾರೆನು ಸಖಿಯೆ, ಬೆಳುದಿಂಗಳು ಬಿಸಿಲಾದವೆ' ಎಂಬ ಮಾತು ಎದೆಯಾಳದ ನಿಟ್ಟುಸಿರನ್ನು ಹೊರಹಾಕುತ್ತದೆ. ಗಗನದ ದಶರಥನ ಬೀಡಿನಲ್ಲಿ (= ಸೂರ್ಯನ ಉರಿಬೆಂಕಿಯಲ್ಲಿ) ಕಾಮಿನಿ ಸೆರೆಯಾದಳೆ ಎನ್ನುವಲ್ಲಿ ವಿರಹದ ಉರಿಬೆಂಕಿಯಲ್ಲಿ ನಲ್ಲೆಯಾದ ತಾನು ಸಿಕ್ಕಿಹೊದೆನೆ ಎಂಬ ತೀವ್ರ ಸಂತಾಪ ವ್ಯಕ್ತವಾಗುತ್ತದೆ. ನಲ್ಲೆಗೆ ನಲ್ಲನ ಅಗಲಿಕೆಯಲ್ಲಿ ಬೆಳುದಿಂಗಳು ಬಿಸಿಲಾಯಿತೆನ್ನುವ ಕಾವ್ಯೋಪಮೆ ಇಲ್ಲಿ ಪರಿಣಾಮಕಾರಿಯಾಗಿದೆ. ಎದೆಯಾಳದ ವಿರಹಜ್ವಾಲೆಯಲ್ಲಿ ಸುಕೋಮಲೆಯಾದ ನಲ್ಲೆ ಸೆರೆಸಿಕ್ಕಿ

---

೮. ಇಲ್ಲಿಂದ ಮುಂದೆ ಕೊಡಲಾಗುವ ವಚನಗಳ ಸಂಖ್ಯೆ 'ಸಕಲ ಪುರಾತನರ ವಚನಗಳು-೩' ರಿಂದ ಉದ್ಧೃತವಾದುವು.

ಸುಟ್ಟುಹೋದಳೆನ್ನುವುದನ್ನು 'ಗಗನದ ದಶರಥನ ಬೀಡಿನಲ್ಲಿ ಕಾಮಿನಿ ಕೈದು ಪೋದಳೆ ?' ಎಂದು ಆಲಂಕಾರಿಕವಾಗಿ, ಅರ್ಥಪೂರ್ಣ ಮಾತುಗಳಲ್ಲಿ ಹೇಳಿರುವುದು ಸೊಗಸಾಗಿದೆ. ತನ್ನ ವಿರಹದ ನೋವನ್ನು ಮಾಘಮಾಸದ ನವಿಲು, ಇರುಳು ತೊಳಲುವ ಜಕ್ಕವಕ್ಕಿ, ಮಾಗಿಯ ಕೋಗಿಲೆಗಳ ಸ್ಥಿತಿ ಚಿತ್ರಗಳ ಮೂಲಕ ಇನ್ನಷ್ಟು ಉಜ್ವಲವಾಗಿಸುವನು (ವ. ೫೨೭). 'ಒಲಿವರ ಕೊಲುವಡೆ ಮಸೆದ ಕೂರಲಗೇಕವ್ವಾ? ಅವರನೊಲ್ಲೆನೆಂದರೆ ಸಾಲದೆ ? ಎನ್ನುವನು.' 'ಮಹಾಲಿಂಗ ಗಜೇಶ್ವರನನಗಲಿದಡೆ ತುಪ್ಪದಲ್ಲಿ ಕಿಚ್ಚು ನಂದಿಸಿದಂತಾದೆ ನೋಡವ್ವಾ' (ವ. ೫೨೧) ಎಂದು ಇನ್ನಷ್ಟು ಸ್ಪಷ್ಟವಾಗಿ ಎದೆಯಾಳದ ನೋವನ್ನು ತೋಡಿಕೊಳ್ಳುವನು. 'ಕೂಪರನಗಲುವದು ಆತ್ಮಘಾತುಕವವ್ವಾ. ದಿವ್ಯವ ಹಿಡಿದಡೆ ಕೈ ಬೇವುದಲ್ಲದೆ ಒಲಿವರನಗಲಿದಡೆ ಸರ್ವಾಂಗ ಬೇವುದವ್ವಾ. ಮಹಾಲಿಂಗ ಗಜೇಶ್ವರನನಗಲಿದಡೆ ನಿದ್ರೆ ಇಲ್ಲ ಕನಸೆಲ್ಲಿಯದವ್ವಾ' [ವ. ೫೩೦] ಎಂದು ಹೇಳಿ, ಪ್ರಿಯನ ವಿರಹಜ್ವಾಲೆ ತನ್ನನ್ನು ಸುಡುತ್ತಿರುವುದನ್ನೂ, ಕನಸುಗಳಿಲ್ಲದ ಒಂಜಿ ರಾತ್ರಿಗಳನ್ನು ನಿದ್ರೆಯಿಲ್ಲದೆ ತಾನು ಕಳೆಯುತ್ತಿರುವುದನ್ನೂ ಅರ್ಥಪೂರ್ಣವಾಗಿ ಹೇಳುವನು.

ನಲ್ಲನೊಡನೆ ಬೆರೆವ ಸುಖವನ್ನು ಮಾತಿನಲ್ಲಿ ಹೇಳಲಾಗದು. 'ಆತನ ಬೆರೆಸಿದ ಕೂಟವನೇನೆಂದು ಹೇಳುವೆನವ್ವಾ. ಕೇಳಲೂಬಾರದು ಹೇಳಲೂಬಾರದು. ಏನ ಹೇಳುವೆನವ್ವಾ, ಶಿಖಿ ಕರ್ಪೂರವ ಬೆರಸಿದಂತೆ' (ವ. ೪೯೭) ಎನ್ನುವನು. ನಲ್ಲನ ಕೂಟದಲ್ಲಿ ತನಗಾದ ಮೈನವಿರೇಳಿಸುವ ಅನುಭವವನ್ನು ಗಜೇಶ ಮಸಣಯ್ಯ ಹೀಗೆ ನಿರೂಪಿಸುವನು :

ಮಾಗಿಯ ಹುಲ್ಲಿನ ಸೋಂಕಿನಂತೆ ತನು ಪುಳಕಿತವಾದಳವ್ವೆ.
ನುಡಿ ತೊದಳು ಅವನ ಒಲವೆ ಆಧಾರವಾಗಿದ್ದಳವ್ವೆ.
ಬಿಳಿಯ ತುಂಬಿ ಕುಂಕುಮದ ರಜದಲ್ಲಿ ಬಂಡುಂಡಂತೆ
ಮಹಾಲಿಂಗ ಗಜೇಶ್ವರನಲ್ಲಿ ತನ್ನಲ್ಲಿ ತಾನೆ ರತಿಯಾಗಿದ್ದಳವ್ವೆ.
(ವ. ೫೦೫)

ಮೇಲಿನ ವಚನದಲ್ಲಿ ನಲ್ಲನ ಅಪ್ಪುಗೆಯಲ್ಲಿ ನಲ್ಲೆಯ ಅಂತರಂಗ ಹೇಗೆ ನಲಿಯಿತೆಂಬುದರ ಸೂಕ್ಷ್ಮ ಚಿತ್ರವಿದೆ. ಮಾಗಿಯ ಹುಲ್ಲಿನ ಸ್ಪರ್ಶದಂತೆ ನಲ್ಲೆಗೆ ನಲ್ಲನ ಸ್ಪರ್ಶ ನಡುಕವನ್ನು ತಂದಿದೆ. ಸಮ್ಮಿಶ್ರಭಾವಗಳ ತಾಕಲಾಟದಲ್ಲಿ ಮಾತು ತೊದಲುತ್ತದೆ. ನಲ್ಲನ ಬಿಸಿಯಪ್ಪುಗೆಯಲ್ಲಿ ನಾಚಿಕೆ, ಭಯ, ದಿಗಿಲುಗಳಿಂದ ಮಾತೂ ಹೊರಬರದೆ ದಿವ್ಯ ಸುಖದ ಸೊಮ್ಮಿನಲ್ಲಿ ಜೋಲುವ ಅವಳಿಗೆ ಅವನ ಒಲವೇ ಆಧಾರವಾಗಿದೆ. 'ತನ್ನಲ್ಲಿ ತಾನೆ ರತಿಯಾಗಿದ್ದಳವ್ವೆ' ಎಂಬುದು ನಲ್ಲೆಯ ವರ್ಣಮಯ ಕನಸಿನ ಲೋಕವನ್ನು ನಮ್ಮ ಕಣ್ಣ ಮುಂದೆ ತರುತ್ತದೆ. ಎಲ್ಲ ಹೆಣ್ಣುಗಳಿಗೂ ತಮ್ಮ ತಮ್ಮ ಗಂಡಂದಿರ ಚೆಲುವಿನ

4]

ಬಗೆಗೆ ಬಾಯ್ತುಂಬ ಹೇಳಿಕೊಳ್ಳುವ ಪುಣ್ಯ. ನಾನಾದರೋ ನನ್ನ ನಲ್ಲ, ಎಂಥವ ನೆಂಬುದನ್ನೂ ಅರಿಯದ ಮುಗ್ಧೆ. ನನಗಾದರೋ ಆ ಪುಣ್ಯವೂ ಇಲ್ಲ ಎಂದು ನಿಟ್ಟುಸಿರಿಡುವ ನಲ್ಲೆಯ ಚಿತ್ರ ಚಿತ್ತಾಕರ್ಷಕವಾಗಿದೆ :

ತಮ್ಮ ತಮ್ಮ ಗಂಡರು ಚೆಲುವರೆಂದು
ಕೊಂಡಾಡುವ ಹೆಣ್ಣುಗಳು ಪುಣ್ಯಜೀವಿಗಳವ್ವಾ.
ನಾ ನಮ್ಮ ನಲ್ಲನೆಂಥವನೆಂದಱಿಯೆನವ್ವಾ.
ಮಹಾಲಿಂಗ ಗಜೇಶ್ವರದೇವ ನಿಱಿಯ ಸೆಱಗ
ಸಡಿಲಿಸಲೊಡನೆ ನಾನೇನೆಂದಱಿಯೆನವ್ವಾ. (ವ. ೪೯೫)

ಕೊನೆಯ ಎರಡು ಸಾಲುಗಳು ವಚನದ ಅಂತರಾರ್ಥವನ್ನು ಧ್ವನಿಪೂರ್ಣ ವಾಗಿಸುತ್ತವೆ ; ದ್ವೈತಸ್ಥಿತಿ ಅದ್ವೈತಸ್ಥಿತಿಗೆ ಹೊರಳುವುದು ಇಲ್ಲಿ ಅರ್ಥಪೂರ್ಣ ವಾಗಿದೆ.

"ಸರಳ ಭಾಷೆ, ಪರಿಚಿತ ಪ್ರತಿಮೆಗಳು, ಅತಿಯಿಲ್ಲದ ಶೃಂಗಾರ, ಕೆಡಮೆ ಮಾತುಗಳು, ಪ್ರಾಮಾಣಿಕವಾದ ಸಂವೇದನೆ ಇವುಗಳಿಂದಾಗಿ ಉರಿಲಿಂಗದೇವ ಮತ್ತು ಗಜೇಶ ಮಸಣಯ್ಯನರು ವಚನ ವಾಙ್ಮಯ ಗಗನದ ಬಣ್ಣದ ಯಮಳ ನಕ್ಷತ್ರಗಳಾಗಿ ಕಂಗೊಳಿಸುತ್ತಿದ್ದಾರೆ."9 ಎಂಬ ಡಾ॥ ಎಂ. ಚಿದಾನಂದಮೂರ್ತಿಗಳ ಅಭಿಪ್ರಾಯ ಒಪ್ಪುವಂತಹುದಾಗಿದೆ.

ಘನಲಿಂಗಿದೇವನು ತೋಂಟದ ಸಿದ್ಧಲಿಂಗಯತಿಯ ನೇರವಾದ ಶಿಷ್ಯ. ಇವನ ಒಟ್ಟು ವಚನಗಳ ಸಂಖ್ಯೆ ಅರುವತ್ತುಮೂರು. ಅವುಗಳಲ್ಲಿ ಎರಡು ಮೂರು ವಚನಗಳು ಸತಿ–ಪತಿ ಭಾವಕ್ಕೆ ಮೀಸಲಾಗಿವೆ. ಮೊದಲನೆಯ ಸುದೀರ್ಘ ವಚನದಲ್ಲೇ ಘನಲಿಂಗಿದೇವ ತನ್ನನ್ನು ಸತಿಯಾಗಿ ಸಂಬೋಧಿಸಿ ಬಗೆಬಗೆಯಾಗಿ ತನ್ನ ಮನದಾಳದ ಪ್ರೀತಿಯನ್ನು, ವಿರಹವನ್ನು ನಿವೇದಿಸುವನು :

ಈ ಜನ್ಮದಲ್ಲಿ–ಪಿಂಡೋತ್ಪತ್ತಿಯಲ್ಲಿಯೇ
ಶರಣಸತಿ–ಲಿಂಗಪತಿಯೆಂಬ ಜ್ಞಾನ ತಲೆದೋರಿ
ಎನಗೆ ನಿನ್ನ ಬಯಕೆಯೆಂಬ ಸಿಂಗಾರದ ಸಿರಿಮುಡಿಯಾಯಿತು.
ಎನಗೆ ನಿನ್ನ ನೋಡುವೆನೆಂಬ ಮುಗಳ್ ಮೊಲೆಮೂಡಿದವು.
ಎನಗೆ ನಿನ್ನೊಳು ನುಡಿಯಬೇಕೆಂಬ
ಉರವಣೆಯ ಸಂಪದದ ಜವ್ವನ ಕುಡಿವರಿಯಿತ್ತು.
ಎನಗೆ ನಿನ್ನನೊಲಿಸಬೇಕೆಂಬ

---

9. ವಚನ ಸಾಹಿತ್ಯ, ಪು. ೧೭೩.

ಸಂಭ್ರಮದ ಕಾಂಚೀಧಾಮ–ಕಟಿಸೂತ್ರ–ಕೇಯೂರ–ನಿಡುಗೊಂಡೆಯ
ವೆಂಬಾಭರಣ
ಅನುಲೇಪನ–ವಸ್ತ್ರಂಗಳೆನಗೆ ಅಲಂಕಾರವಾಯಿತ್ತು.
ಭಕ್ತಿಯೆಂಬ ವಿರಹಾಗ್ನಿ, ಎನ್ನ ಹೃದಯ ಕಮಲದಲ್ಲಿ ಬೆಳೆದು
ಬೀದಿವರಿದು, ನಿಂತಲ್ಲಿ ನಿಲಲೀಸದಯ್ಯ,
ಕುಂತಲ್ಲಿ ಕುಳ್ಳಿರಲೀಸದಯ್ಯ.
ಮನ ನಿಂದಲ್ಲಿ ಮನೋಹರವಪ್ಪುದಯ್ಯ.
ಅಂಗ–ಮನ–ಪ್ರಾಣ–ನೇತ್ರ–ಚಿತ್ತಂಗಳೊಳು
ಪಂಚಮುಖವೆಂಬ ಪಂಚಬಾಣಗಳು ನೆಟ್ಟವಯ್ಯ,
ನಾನು ಧರೆಯೊಳುಳಿವುದರಿದು
ಪ್ರೇಮದಿಂ ಬಂದು, ಕಣ್ದುಂಬಿ ನೋಡಿ
ಮನವೊಲಿದು ಮಾತಾಡಿ, ಕರುಣದಿಂ ಕೈವಿಡಿದು
ಅಕ್ಕರಿಂದಾಲಿಂಗಿಸಿ, ದಿಟ್ಟಿಸಿ, ಬೊಟ್ಟಾಡಿ
ಲಲ್ಲೆವಾತಿಂ ಗಲ್ಲವ ಪಿಡಿದು
ಪುಷ್ಪ ಪರಿಮಳದಂತೆ ನಾ–ನೀನುಭಯವಿಲ್ಲದಂತೆ
ಕೂಡೆನ್ನ ಪ್ರಾಣೇಶನೇ !
ಕೂಡದಿದ್ದರೆ ಗಲ್ಲವ ಪಿಡಿ,
ಪಿಡಿಯದಿದ್ದರೆ ಬೊಟ್ಟಾಡು,
ಬೊಟ್ಟಾಡದಿದ್ದರೆ ಆಲಂಗಿಸು
ಆಲಂಗಿಸದಿದ್ದರೆ ಕೈವಿಡಿ
ಕೈವಿಡಿಯದಿದ್ದರೆ ಮಾತಾಡು,
ಮಾತಾಡದಿದ್ದರೆ ನೋಡು, ನೋಡದಿದ್ದರೆ ಬಾ
ಬಾರದಿದ್ದರೆ, ಪ್ರಮಥಗಣಂಗಳೊಡನೆ ನಿನ್ನವಳೆಂದು
ನುಡಿಯದಿದ್ದರೆ, ನಿನ್ನ ಮನದಲ್ಲಿ ನನ್ನವಳೆಂದು ಭಾವಿಸು
ಭಾವಿಸದಿದ್ದರೆ, ಪುಣ್ಯ ಕಣ್ದೆರೆಯದು
ಕರ್ಮ ಕಾಂತಿಯುಪ್ಪದು. ಕಾಮ ಕೈದುಗೊಂಬ
ಕಾಲ ಕಲಿಯಪ್ಪ, ಭವಕ್ಕೆ ಬಲ್ಮೆ ದೊರೆವುದು.

—ಹೀಗೆ ನಾನಾವಿಧದಲ್ಲಿ ಪರಮಾತ್ಮನ ಒಲುಮೆಗಾಗಿ ಆ ಜೀವ ತುಡಿಯು ವುದು ; 'ನಿನ್ನ ಮೆಚ್ಚಿಸಿಕೊಳ್ಳಲರಿಯದ ಮುಗ್ಧವೆಣ್ಣಿನ ಪತಿಭಕ್ತಿಯಂ ಸಾಧಿಸು ಎನ್ನವಸ್ಥೆಯಂ ಲಾಲಿಸು ನಿನ್ನ ಶ್ರೀಪಾದಪದ್ಮದೊಳಗೆನ್ನನೊಡಗೂಡಿಸು ಎನ್ನ ಬಿನ್ನಪಮಂ ಪಾಲಿಸು ಘನಲಿಂಗಿಯ ಮೋಹದ ಚೆನ್ನಮಲ್ಲಿಕಾರ್ಜುನ' ಎಂದು ಪ್ರಾರ್ಥಿಸುವುದು.

ನಾನು ಶರಣಸತಿ ಲಿಂಗಪತಿಯೆಂದು ಬಣ್ಣನೆಯ ಮಾತನಾಡುವ ಕುಟಿಲ ಹೆಣ್ಣಲ್ಲ, ನಿನಗೆ ಮೆಚ್ಚಿ ಮರುಳಾದ ಪತಿವ್ರತೆ. ಮಾನವರ ಸಂಚಾರವಿಲ್ಲದ ಭೀಕರ ಕಾಡಿನಲ್ಲಿ ಹೋಗುತ್ತಿರುವಾಗ ಸರ್ವಾಲಂಕಾರ ಭೂಷಿತಳಾದ ಪರಮ ಸುಂದರಿ ಯೋರ್ವಳು ನನ್ನನ್ನು ತಡೆದು ಅಮರ್ದಪ್ಪಿ ಆಲಂಗಿಸಿ, ಮೋಹಿಸಿ, ಮುದ್ದು ಮಾಡಿ ಕಾಮಾತುರದ ಭಕ್ತಿಯಿಂದ ನನ್ನ ಪಾದವಿಡಿದು ತನ್ನ ಕೂಟಕ್ಕೆ ನನ್ನನ್ನು ಒಡಂಬಡಿಸುವ ಕಾಲದಲ್ಲಿ 'ನಾನು ಹುಲಿಹಿಡಿದ ಕಪಿಲೆಯಂತೆ ನಡುಗುತ್ತಿರ್ದೇನೆ. ನಿನ್ನ ಸತಿಯೆಂದು ಕೈ ಪಿಡಿದು, ನನ್ನ ರಕ್ಷಣೆಯ ಮಾಡು. ಆದಲ್ಲದೆ ಅವಳಿಗೆ ಕಿಂಚಿತ್ತು ಮನಸೋತೆನಾದರೆ ನೀಂ ನೂಂಕೆನ್ನ ಜನ್ಮ ಜನ್ಮಾಂತರ ಎಕ್ಕಲನರಕದಲ್ಲಿ. ಎನ್ನ ನೀಂ ನೂಂಕದಿರ್ದಯಾದಡೆ ನಿಮಗೆ ನಿಮ್ಮಾಣೆ ನಿಮ್ಮ ಅರ್ಧಾಂಗಿಯಾಣೆ ನಿಮ್ಮ ಬಸವಾದಿ ಪ್ರಮಥರಾಣೆ. ಎನ್ನೀ ಅತಿಬಿರುದಿನ ಭಾಷೆಯೆಂಬುದು ನಿನ್ನ ಕರುಣವಯ್ಯ' (ವ. ೧೧) ಎಂದು ಹೇಳುವನು. ಘನಲಿಂಗಿ ಕೊಡುವ ದೃಷ್ಟಾಂತವು ಲೌಕಿಕ ಜಗತ್ತಿನ ಮೋಹಕ ಸೆಳೆತವನ್ನು ಕುರಿತದ್ದಾಗಿದೆ. ಇದರಿಂದ ಬಿಡುಗಡೆ ಮಾಡುವಂತೆ ಪ್ರಾರ್ಥಿಸುವಾಗ, ನಿನ್ನ ಸತಿಯೆಂದು ಕೈಪಿಡಿದು ನನ್ನನ್ನು ರಕ್ಷಿಸು ಎನ್ನುವನು. ಇಲ್ಲಿ ಕೊಟ್ಟಿರುವ ದೃಷ್ಟಾಂತ ಹೊಸಬಗೆಯದಾಗಿದೆ.

ಮೂರನೆಯ ವಚನದಲ್ಲಿ 'ಎಲೆ ತಂಗಿ, ಶರಣಸತಿ ಲಿಂಗಪತಿಯಾದ ಪತಿವ್ರತಾ ಭಾವದ ಚಿಹ್ನೆ ನಿನ್ನ ನಡೆ ನುಡಿಯಲ್ಲಿ ಹೊಗರುದೋರುತ್ತಿದೆ. ನಿನ್ನ ಪೂರ್ವಾಪರ ವಾವುದಮ್ಮ ?' ಎಂದು ಯಾರೋ ಕೇಳಿದಂತೆ, ಅದಕ್ಕೆ ಉತ್ತರವಾಗಿ ತನ್ನ ಹಿಂದು-ಮುಂದನ್ನು ಹೇಳಿಕೊಳ್ಳುವಂತೆ ಘನಲಿಂಗಿದೇವ ತನ್ನ ಸ್ವಕೀಯ ವಿಷಯುಗಳನ್ನು ತಿಳಿಯಪಡಿಸಿರುವನು. ತೋಂಟದಾರ್ಯನು ತನ್ನ ಕೃಪೆಯೆಂಬ ತೊಟ್ಟಿಲೊಳಗೆ ನನ್ನನ್ನು ಮಲಗಿಸಿ ಪ್ರಮಥಗಣಂಗಳ ವಚನ ಸ್ವರೂಪ ತತ್ವಾರ್ಥವೆಂಬ ಹಾಲು ತುಪ್ಪವನ್ನು ಸದಾ ದಣಿಯಲೆರೆದು ಆಕ್ಕರೆಯಿಂದ ಕಾಪಾಡಿ 'ಘನಲಿಂಗಿ' ಎಂಬ ಹೆಸರಿಟ್ಟು ಪ್ರಾಯಸಮರ್ಥೆಯಾದ ತನಗೆ

ಸತ್ಯಸದಾಚಾರ ಜ್ಞಾನಕ್ರೀಗಳೆಂಬ ದಿವ್ಯಾಭರಣಂಗಳಂ ತೊಡಿಸಿ
ಅರಿವೆಂಬ ಬಣ್ಣವ ನಿರಿವಿಡಿದುಡಿಸಿ
ಅರ್ತಿಯ ಮಾಡುತಿಪ್ಪ ಸಮಯದಲ್ಲಿ
ಘನಲಿಂಗಿಯ ಮೋಹದ ಚೆನ್ನಮಲ್ಲಿಕಾರ್ಜುನಂ
ತನಗೆ ನಾನಾಗಬೇಕೆಂದು ಬೇಡಿ ಕಳುಹಲು
ಎಮ್ಮವರು ಅವರಿಂಗೆ ಮಾತನಿಕ್ಕಿದರಮ್ಮಾ

ಎಂದು ಹೇಳುವನು. ಘನಲಿಂಗಿದೇವನಲ್ಲಿ ಸತಿ–ಪತಿಭಾವದ ವಚನಗಳು ಬಹಳ ಕಡಿಮೆಯಿದ್ದರೂ ಆ ವಚನಗಳಲ್ಲಿನ ಭಾವತೀವ್ರತೆ ನಮ್ಮ ಮನಸ್ಸನ್ನು ಮುಟ್ಟಿ ಕ್ರಮಕ್ರಮವಾಗಿ ಆವರಿಸುತ್ತಾ ಹೋಗುತ್ತದೆ.

ಕನ್ನಡಕ್ಕೆ ಸತಿ–ಪತಿಭಾವದ ಕಲ್ಪನೆಯು ಎರವಲಾಗಿ ಬಂದಿದ್ದರೂ ವಚನಕಾರರು ಅದನ್ನೇ 'ಶರಣಸತಿ–ಲಿಂಗಪತಿ' ಎಂದು ಕರೆದು, ತಮ್ಮ ಪ್ರತಿಭೆಯ ಮೂಸೆಯಲ್ಲಿ ಅದು ಇನ್ನಷ್ಟು ಕಳೆಗೊಳ್ಳುವಂತೆ ಮಾಡಿರುವರು. ಪರಮಾತ್ಮನೊಡನಿರುವ ತಮ್ಮ ಆತ್ಮೀಯ ಸಂಬಂಧವನ್ನು ಸ್ಪಷ್ಟಪಡಿಸುವಾಗ ಅವರು ಹೆಣ್ಣು-ಗಂಡಿನ ಆಕರ್ಷಣೆಯ ಮೂಲವಾದ ಕಾಮವನ್ನು, ಅದರಿಂದ ಹೆಣ್ಣು-ಗಂಡಿನ ಮನದಲ್ಲಾಗುವ ಭಾವತಾಡನವನ್ನು, ಮಾನಸಿಕವಾದ ನೋವು–ನಲಿವುಗಳನ್ನು ಅದರೊಡನೆ ತಳುಕು ಮಾಡುವ ಪ್ರಯತ್ನ ನಡೆಸಿದರು. ವಚನಕಾರರಿಗೆ ಸತಿ–ಪತಿ ಭಾವದ ಅಭಿವ್ಯಕ್ತಿ ಒಂದು ಸವಾಲೂ ಆಗಿರಬಹುದು. ಅದನ್ನು ಅವರು ಧೈರ್ಯವಾಗಿ ಸ್ವೀಕರಿಸಿದ್ದರಿಂದ ಒಂದು ಹೊಸ ಭಕ್ತಿಪ್ರಪಂಚವು ವಚನ ಸಾಹಿತ್ಯದಲ್ಲಿ ಮೈದಾಳಲು ಅವಕಾಶವಾಯಿತು. ಭಕ್ತಿಯು ವ್ಯಕ್ತಿಯ ಅಂತರಂಗದ ವೈಯಕ್ತಿಕ ನಿವೇದನೆಯಾಗಿರುವುದರಿಂದ ತಮ್ಮ ಭಕ್ತಿಯ ತೀವ್ರತೆಯನ್ನು, ಉತ್ಕಟ ಸ್ಥಿತಿಯನ್ನು ಸತಿ–ಪತಿ ಭಾವದ ಮೂಲಕ ಸಂವಹನಮಾಡಲು ಸಾಧ್ಯವಾಯಿತು. ಅಂತರಂಗದ ಸಂವೇದನೆಯನ್ನು ಈ ಹೊಸ ಮಾಧ್ಯಮದ ಮೂಲಕ ತೋಡಿಕೊಳ್ಳುವಾಗ ರಾಗಭಾವಗಳು, ಶೃಂಗಾರದ ಅಭಿನಿವೇಶನದಲ್ಲಿ ಅರ್ಥಪೂರ್ಣವಾದ ಮಾತುಗಳಲ್ಲಿ ಎರಕಗೊಂಡವು. ಪ್ರತಿಮಾಲೋಕ ನಮ್ಮ ಭಾವ ಜಗತ್ತಿನಲ್ಲಿ ಹೊಸ ದೃಶ್ಯ ಪ್ರಪಂಚವನ್ನು ಬಿಂಬಿಸಿತು ; ವಚನಕಾರರ ಮಾತಿನ ಜಾದೂಗಾರಿಕೆಯಿಂದ ವಿಸ್ಮಯಲೋಕದ ತೆರೆ ಸರಿಯಿತು.

## ಆಧಾರ ಗ್ರಂಥಗಳು :

೧. ಬಸವಣ್ಣನವರ ಷಟ್‌ಸ್ಥಲದ ವಚನಗಳು (ಜನಪ್ರಿಯ ಆವೃತ್ತಿ) ಸಂ : ಶಿ. ಶಿ. ಬಸವನಾಳ, ಪ್ರ : ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆ, ಧಾರವಾಡ (೧೯೬೮)

೨. ಅಲ್ಲಮ ಪ್ರಭುದೇವರ ವಚನಗಳು ಸಂ : ಡಾ॥ ಆರ್. ಸಿ. ಹಿರೇಮಠ, ಡಾ॥ ಎಂ. ಎಸ್. ಸುಂಕಾಪುರ, ಪ್ರ : ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ (೧೯೭೬)

೩. ಸಿದ್ಧರಾಮೇಶ್ವರ ವಚನಗಳು ಸಂ : ಡಾ॥ ಆರ್. ಸಿ. ಹಿರೇಮಠ, ಪ್ರ : ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ (೧೯೬೮)

೪. ಸಕಲ ಪುರಾತನರ ವಚನಗಳು–೧ ಸಂ : ಡಾ॥ ಆರ್. ಸಿ. ಹಿರೇಮಠ, ಪ್ರ : ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ (೧೯೭೨)

೫. ಸಕಲ ಪುರಾತನರ ವಚನಗಳು–೨ ಸಂ : ಡಾ॥ ಎಂ. ಎಸ್. ಸುಂಕಾಪುರ, ಪ್ರ : ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ (೧೯೭೬)

೬. ಘನಲಿಂಗದೇವರ ವಚನಗಳು ಸಂ: ಶ್ರೀ ಶಿವರಾತ್ರಿರಾಜೇಂದ್ರಸ್ವಾಮಿಗಳು, ಪ್ರ : ಶಿವರಾತ್ರೀಶ್ವರ ಗ್ರಂಥಮಾಲೆ, ಮೈಸೂರು (೧೯೬೪)

೭. ವಚನ ಸಾಹಿತ್ಯ: ಡಾ॥ ಎಂ. ಚಿದಾನಂದಮೂರ್ತಿ, ಪ್ರ : ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು (೧೯೭೫)

೮. ಚನ್ನಬಸವಣ್ಣನವರ ವಚನಗಳು ಸಂ : ಡಾ॥ ಆರ್. ಸಿ. ಹಿರೇಮಠ, ಪ್ರ : ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ (೧೯೬೫).



# ಕೆಳವರ್ಗದವರು ಹಾಗೂ ಪ್ರತಿಭಟನೆ

ಬಸವ ಸಮಕಾಲೀನರು ನಡೆಸಹೊರಟ ಸಾಮಾಜಿಕ ಕ್ರಾಂತಿಗೆ ಪ್ರಮುಖ ಕಾರಣ, ಆಗಿನ ಸಮಾಜದಲ್ಲಿ ಆಳವಾಗಿ ಬೇರೂರಿದ್ದ ವರ್ಣ ಹಾಗೂ ವರ್ಗ ಸಮಸ್ಯೆಗಳು. ಪರಂಪರೆಯಿಂದ ಬೆಳೆಯಿಸಿಕೊಂಡು ಬಂದಿದ್ದ ಈ ವರ್ಣ ಹಾಗೂ ವರ್ಗ ನೀತಿಗಳು ಸಮಾಜದಲ್ಲಿ ಉತ್ತಮ–ಅಧಮ, ಶ್ರೀಮಂತ–ಬಡವ ಈ ಭೇದವನ್ನುಂಟುಮಾಡಿ ಶೋಷಣೆಗೆ ದಾರಿ ಮಾಡಿಕೊಟ್ಟಿದ್ದಿತು. ಈ ಶೋಷಣೆ ಉತ್ತಮರು ತಮ್ಮ ವರ್ಣ ವ್ಯವಸ್ಥೆಯ ಭದ್ರಕೋಟೆಗೆ ಅಧಮರು ತಲೆ ಹಾಕದಂತೆಯೂ, ಶ್ರೀಮಂತರು ತಮ್ಮ ಸಂಪತ್ತು ಕ್ಷೀಣಿಸದಿರಲು ಬಡವರ ಏಳಿಗೆಯಾಗದಂತೆಯೂ ಮಾಡುವುದರ ಮೂಲಕ ಬಹಳ ಕಾಲ ಯಶಸ್ವಿಯಾಗಿ ಸಾಗಿ ಬಂದಿತು. ಸಾಮಾಜಿಕ ಕ್ರಾಂತಿ ನಡೆಸ ಹೊರಟ ಬಸವಾದಿ ಶಿವಶರಣರು ಈ ಶೋಷಣೆಯ ಮೂಲವನ್ನು ಕಂಡುಕೊಂಡು ಅದರ ನಿವಾರಣೆಗಾಗಿ ವಿಶೇಷವಾಗಿ ಶ್ರಮಿಸಿದರು. ಹುಟ್ಟಿನೊಂದಿಗೆ ಕುಲವನ್ನು ನಿರ್ಣಯಿಸುವ ಪರಂಪರೆಯಿಂದ ಬಂದ ವಿಧಿ (ಅ) ವಿಧಾನವನ್ನು ಶಿವಶರಣರು ಉಗ್ರವಾಗಿ ಖಂಡಿಸಿ ಕುಲವನ್ನು ನಿರ್ಣಯಿಸುವುದು ವ್ಯಕ್ತಿಯ ಹುಟ್ಟಿನ ಮೂಲಕವಲ್ಲ, ಅವನ ವರ್ತನೆಯ ಮೂಲಕ ಎಂದು ಘೋಷಿಸಿದರು. ಅವರು ಹಾಗೆ ಘೋಷಿಸಿ ಸುಮ್ಮನಾಗಲಿಲ್ಲ, ಅದನ್ನು ಕಾರ್ಯರೂಪಕ್ಕೆ ತರಹೊರಟರು. ಮಾದಾರ ಚನ್ನಯ್ಯ, ಡೋಹರ ಕಕ್ಕಯ್ಯ, ಚಿಕ್ಕಯ್ಯ, ಕಿನ್ನರಿ ಬೊಮ್ಮಯ್ಯ ಇವರೇ ಮೊದಲಾದ ಸಾಮಾಜಿಕವಾಗಿ ಅಸ್ಪೃಶ್ಯರೆನಿಸಿದ್ದವರೆಲ್ಲರೂ ಶಿವಶರಣರ ಪಾಲಿಗೆ ಉತ್ತಮರಾದರು.

ಸಾಮಾಜಿಕವಾಗಿ, ಆರ್ಥಿಕವಾಗಿ, ಶೈಕ್ಷಣಿಕವಾಗಿ ತೀರಾ ಹಿಂದುಳಿದಿದ್ದ ; ಉತ್ತಮರಿಗೆ ಲಭ್ಯವಾಗಿದ್ದ ಎಲ್ಲ ಬಗೆಯ ಅನುಕೂಲಗಳಿಂದ ವಂಚಿತರಾಗಿದ್ದ ; ಪರರ ಸೇವೆಯಲ್ಲಿ ಮನೆಮಂದಿಯೆಲ್ಲ ಹಣ್ಣಾಗಿ, ದುಡಿತದ ಶ್ರಮವನ್ನು ಕುಡಿತದಲ್ಲಿ ಮರೆತು

ದೈನ್ಯವೇ ಮೂರ್ತಿವೆತ್ತಂತಾಗಿ ಆತ್ಮವಿಶ್ವಾಸವನ್ನೇ ಕಳೆದುಕೊಂಡಿದ್ದ ಅಸ್ಪೃಶ್ಯರ ಬದುಕನ್ನು ಮೇಲೆತ್ತುವ ಮೂಲಕ ಶಿವಶರಣರು ಕ್ರಾಂತಿಗೆ ಕರೆಕೊಟ್ಟರು. ಅಸ್ಪೃಶ್ಯರನ್ನು ಭಕ್ತರನ್ನಾಗಿಸುವುದರ ಮೂಲಕ ತಾವು ಉತ್ತಮರೆಂಬ ಭಾವನೆ ಅವರಲ್ಲಿ ಬೇರೂರಲು, ಅವರನ್ನು ಸರಿಸಮಾನರಾಗಿ ಗೌರವಿಸುವುದರ ಮೂಲಕ ಅವರಲ್ಲಿ ಆತ್ಮವಿಶ್ವಾಸವನ್ನು ಬೆಳಸಲು ಶಿವಶರಣರು ಪ್ರಯತ್ನಿಸಿದರು. ದೀಕ್ಷೆಯ ಮೂಲಕ ಅವರ ಅಂತರಂಗ ಬಹಿರಂಗ ಶುದ್ಧಿಯಾಗಲು ; ಬೋಧನೆಯ ಮೂಲಕ ಅವರ ಪೂರ್ವಾಚಾರಗಳನ್ನು ಮೌಢ್ಯಗಳನ್ನು ನಿವಾರಿಸಲು ; ಎಲ್ಲಕ್ಕಿಂತ ಮಿಗಿಲಾಗಿ ಎಲ್ಲರಂತೆ ತಾವೂ ಮನುಷ್ಯರು ಯೋಗ್ಯ ಜೀವನ ನಡೆಸುವ ಹಕ್ಕು ತಮಗೂ ಇದೆ, ಅನ್ಯರ ಹಂಗಿನಲ್ಲಿ ಬಾಳದೆ ಸ್ವಂತ ದುಡಿಮೆಯಿಂದ ಸತ್ಯ ಶುದ್ಧ ಬಾಳುವೆ ನಡೆಸುವೆವೆನ್ನುವ ಪ್ರತಿಜ್ಞೆ ಕೈಗೊಳ್ಳಲು ; ಅವರಲ್ಲಿ ಹೊಸ ಜೀವನೋತ್ಸಾಹ ಮೂಡಿಸಲು ಶಿವಶರಣರು ಪ್ರಾಂಜಲ ಮನಸ್ಸಿನಿಂದ ಪ್ರಯತ್ನಿಸಿದರು. ಸದ್ಯಕ್ಕೆ ಆದ್ಯ ವಚನಕಾರನೆಂದು ಪರಿಗಣಿಸಿರುವ ಜೇಡರ ದಾಸಿಮಯ್ಯನು ತನ್ನ ವಚನವೊಂದರಲ್ಲಿ

> ಕೀಳು ಡೋಹರ ಕಕ್ಕ, ಕೀಳು ಮಾದರ ಚನ್ನ
> ಕೀಳು ಓಹಿಲದೇವ. ಕೀಳು ಉದ್ಭಟಯ್ಯ
> ಕೀಳಿಂಗಲ್ಲದೆ ಹಯನು ಕರೆಯದು ಕಾಣ (ವ. ೭೯)

ಎಂದು ಹೇಳುವುದರ ಮೂಲಕ ಸಮಾಜ ಬಾಹಿರರಾದವರನ್ನು ಮೇಲಾಗಿ ಗೌರವಿಸಿದನು. ಉತ್ತಮ ಕುಲದಲ್ಲಿ ಹುಟ್ಟಿದ್ದೇ ಕಾರಣವಾಗಿ 'ಕಕ್ಕಯ್ಯನೊಕ್ಕುದನಿಕ್ಕ' 'ಮನ್ನಣೆಯ ಚನ್ನಯ್ಯ ಮನ್ನಿಸ' ಎಂದು ಬಸವಣ್ಣ ತನ್ನ ಕಷ್ಟವನ್ನು ವಚನವೊಂದರಲ್ಲಿ ತೋಡಿಕೊಂಡಿರುವರು. ಉತ್ತಮ ಕುಲದಲ್ಲಿ ಹುಟ್ಟಿದ್ದರಿಂದ ತನ್ನನ್ನು ಅವರು ದೂರವಿರಿಸುವರು, ತಮ್ಮ ಹತ್ತಿರಕ್ಕೆ ಬರಗೊಡರು, ತಮ್ಮವನನ್ನಾಗಿ ಭಾವಿಸರು ಎಂಬ ಚಿಂತೆ ಬಸವಣ್ಣನ ಪಾಲಿಗೆ ಸಹಜವಾದುದು.

ಮಹಾನ್ ರಾಜ್ಯದ ದಂಡಾಧಿಪತಿಯೂ ಉತ್ತಮವಂಶ ಸಂಜಾತನೂ ಆದ ಬಸವಣ್ಣನು ಅಸ್ಪೃಶ್ಯರ ಉದ್ಧಾರಕ್ಕೆ ಹೊರಟಾಗ ಎದುರಿಸಿದ ಸಮಸ್ಯೆ 'ಅಪ್ಪನು ಡೋಹಾರ ಕಕ್ಕಯ್ಯನಾಗಿ, ಮುತ್ತಯ್ಯ ಚೆನ್ನಯ್ಯನಾದರೆ ಆನು ಬದುಕೆನೆ ? ಮತ್ತಾ ಶ್ವಪಚಯ್ಯನ ಸನ್ನಿಧಿಯಿಂದ ಭಕ್ತಿಯ ಸದ್‌ಗುಣವ ನಾನರಿವೆನಯ್ಯಾ. ಕಷ್ಟ ಜಾತಿಯ ಜನ್ಮದಲ್ಲಿ ಜನಿಸಿದೆ, ಎನಗಿದು ವಿಧಿಯೆ !' ಎಂದು ಬಸವಣ್ಣ ಇನ್ನೊಂದು ವಚನದಲ್ಲಿ ತನ್ನ ಮನದ ದುಗುಡವನ್ನು ಹೇಳಿಕೊಂಡಿರುವನು. ಅವರ ಬಗೆಗಿರುವ ತನ್ನ ಅಂತರಾಳದ ಗೌರವವನ್ನು ಬಸವಣ್ಣ ಹಲವಾರು ವಚನಗಳಲ್ಲಿ ವ್ಯಕ್ತಪಡಿಸಿರುವನು. ಎಮ್ಮ ತಾಯಿ ನಿಂಬವ್ವೆ, ಎಮ್ಮಯ್ಯ ಚನ್ನಯ್ಯ, ಎಮ್ಮಕ್ಕ ಕಂಚಿಯಲ್ಲಿ ಬಾಣಸವ ಮಾಡುವಳು ಎಂದು ಒಂದೆಡೆ ಹೇಳಿದರೆ, ಕಕ್ಕಯ್ಯ, ಹಿರಿಯಯ್ಯ,

ಚಿಕ್ಕಯ್ಯ, ಚೆನ್ನಯ್ಯ ಇವರೆಲ್ಲಾ ನನ್ನನ್ನು ಎತ್ತಿ ಮುದ್ದಾಡಿ ಸಲಹಿದರು ಎಂದು ಮತ್ತೊಂದೆಡೆ ಹೇಳುವನು (ವ. ೩೫೪). ಚೆನ್ನಯ್ಯನ ಮನೆಯ ದಾಸಿಯ ಮಗನು ಕಕ್ಕಯ್ಯನ ಮನೆಯ ದಾಸಿಯ ಮಗಳು—ಇವರಿಬ್ಬರು ಹೊಲದಲ್ಲಿ ಬೆರಣಿಗೆ ಹೋಗಿ ಸಂಗವ ಮಾಡಿದರು ; ಇವರಿಬ್ಬರಿಗೆ ಹುಟ್ಟಿದ ಮಗ ನಾನು ಕೂಡಲಸಂಗಮದೇವ ಸಾಕ್ಷಿಯಾಗಿ ಎಂದು ಒಂದು ವಚನದಲ್ಲಿ ಹೇಳಿಕೊಂಡಿರುವನು (ವ. ೩೪೮). ಇಷ್ಟು ಹೀನಾಯವಾಗಿ ತನ್ನನ್ನು ಕರೆದುಕೊಳ್ಳುವುದರಲ್ಲಿ ಬಸವಣ್ಣನಿಗೆ ಒಂದು ಬಗೆಯ ಆನಂದವಿದೆ. 'ಆವನಾದರೇನು, ಶ್ರೀಮಹಾದೇವನ ನೆನೆವವನ ಬಾಯ ತಂಬುಲ ಮೆಲುವೆ, ಬೀಳುಡಿಗೆಯ ಹೊದೆವೆ. ಪಾದರಕ್ಷೆಯ ಕಾಯ್ದು ಬದುಕುವೆ' ; 'ಹೊಲೆಯ ಮಾದಿಗ ಭಕ್ತನಾದಡೆ ಆತನ ಮನೆಯ ಸೊಣಗಂಗೆ ಪಂಚಮಹಾ ವಾದ್ಯದಲ್ಲಿ ಸನ್ಮಾನನೆಯ ಮಾಡೆನೆ ? ನೆಲವನುಗ್ಘಡಿಪೆ ಉಘೇ ಚಾಂಗು ಭಲರೇ ಎಂದು !' (ವ. ೪೬೬)–ಹೀಗೆ ಮನದುಂಬಿ ಹೇಳುವ ಪ್ರಾಮಾಣಿಕತೆ ಬಸವಣ್ಣನ ಭವ್ಯ ವ್ಯಕ್ತಿತ್ವವನ್ನು ಇನ್ನಷ್ಟು ಉಜ್ವಲವಾಗಿಸುತ್ತದೆ. "ಸಮಾಜದ ತೀರ ಕೆಳವರ್ಗದವರೆಂದು ಭಾವಿಸಲಾಗಿದ್ದ ಅಸ್ಪೃಶ್ಯರ ಬಗ್ಗೆ ಅವನು ತಾಳಿದ ನಿಲುವು ಭಾರತದ ಇತಿಹಾಸದಲ್ಲಿ ಅನನ್ಯವಾದುದು. ಅವರ ಬಗ್ಗೆ ಅವನು ಅಹಂಕಾರ ಮೂಲವಾದ ಪೋಷಕ ಮನೋಭಾವವನ್ನಾಗಲೀ ಅಥವಾ ಬರಿಯ ತೋರಿಕೆಯ ಸಹಾನುಭೂತಿಯ ಮನೋಭಾವವನ್ನಾಗಲೀ ತಾಳಲಿಲ್ಲ. ಅವನು ನಿಜವಾದ ಅರ್ಥದಲ್ಲಿ ಅವರನ್ನು ಪ್ರೀತಿಸಿದ ; ಅವರೊಡನೆ ಕೂಡಿ ಬದುಕಿದ."[1]

ಬಸವಣ್ಣ ಅಸ್ಪೃಶ್ಯರ ಮನದಲ್ಲಿ ಹಚ್ಚಿದ ಆತ್ಮವಿಶ್ವಾಸದ ಕಿಚ್ಚು ಭಗ್ಗನೆ ಇಡೀ ಜನಾಂಗವನ್ನು ಆವರಿಸಿದುದು ಪವಾಡವಾಗಿ, ಆದರೂ ನಂಬಲೇಬೇಕಾದ ಸತ್ಯ ಸಂಗತಿಯಾಗಿ ಇತಿಹಾಸದಲ್ಲಿ ಕಾಣಬರುತ್ತದೆ. ವಚನಕಾರರು ಅದರಲ್ಲೂ ಕೆಳವರ್ಗದ ವಚನಕಾರರು ಅದನ್ನು ತಮ್ಮ ಬರಹದಲ್ಲಿ ಸ್ಪಷ್ಟವಾಗಿ ದಾಖಲಿಸಿರುವರು. ಕೆಳವರ್ಗದ ವಚನಕಾರ ತನ್ನ ದೈನಂದಿನ ಅನುಭವ ಅನಿಸಿಕೆಗಳ ಅಭಿವ್ಯಕ್ತಿಗಾಗಿ 'ವಚನ'ವನ್ನು ಸಮರ್ಥ ಮಾಧ್ಯಮವನ್ನಾಗಿ ಬಳಸಿಕೊಂಡನು. ವಚನಕಾರನ ಕಾಯಕಕ್ಕೂ ಬರವಣಿಗೆಗೂ ನೇರ ಸಂಬಂಧ ಬಂದುದು ಕನ್ನಡ ಸಾಹಿತ್ಯದಲ್ಲಿ ಇದೇ ಮೊದಲು. 'ಕಾಯಕತತ್ತ್ವ' ದುಡಿದು ತಿನ್ನಬೇಕೆಂಬ 'ಛಲ'ವನ್ನು ಕೆಳವರ್ಗದವರಲ್ಲಿ ಮೂಡಿಸಿತು. 'ಅಸಿಯಾಗಲಿ ಕೃಷಿಯಾಗಲಿ ವಾಚಕ ವಾಣಿಜ ಮಸಿಯಾಗಲಿ ಮಾಡುವಲ್ಲಿ ಹುಸಿಯಿಲ್ಲದಿರಬೇಕು. ಆದು ಅಸಮಾಕ್ಷನ ಬರವು. ಪಶುಪತಿಯ ಇರವು' ಎಂದು ಮೆರೆಮಿಂಡಯ್ಯನೆಂಬ ವಚನಕಾರ ಹೇಳುವನು (ಸಪುವ. ೧ ವ. ೩೨೫). ಯಾವುದೇ ಕಾಯಕವಾಗಲಿ ಮೋಸ, ವಂಚನೆಗಳಿಲ್ಲದೆ

1. ಡಾ॥ ಎಂ. ಚಿದಾನಂದಮೂರ್ತಿ : ವಚನ ಸಾಹಿತ್ಯ, ಪು. ೭೪

ಮಾಡಬೇಕು. ಕಾಯಕದಲ್ಲಿ ಮೇಲು ಕೀಳೆಂಬುದಿಲ್ಲ. ಕಾಯಕ ಸೂತ್ರದಲ್ಲಿ ಎಲ್ಲವೂ, ಎಲ್ಲರೂ ಸಮಾನ. ಮಾಡುವ ಕಾಯಕ ಶಿವನಿಂದ ವರವಾಗಿ ಬಂದುದು. ಮಾಡುವ ಕಾಯಕದಲ್ಲೇ ಶಿವನಿರುವನು—ಇವಿಷ್ಟೂ ಮೆರೆಮಿಂಡಯ್ಯನ ವಚನದಲ್ಲಿ ಧ್ವನಿಸುವ ಅರ್ಥ. ಆಯ್ದಕ್ಕಿ ಮಾರಯ್ಯ ಕಾಯಕದಲ್ಲಿ ತಲ್ಲೀನನಾದ ಭಕ್ತನು ಗುರುದರ್ಶನವಾದರೂ ಲಿಂಗಪೂಜೆಯಾದರೂ ಜಂಗಮ ತನ್ನ ಮುಂದಿದ್ದರೂ ಮರೆಯಬೇಕು ಎನ್ನುವನು. ಅವನ ಪ್ರಕಾರ 'ಕಾಯಕವೇ ಕೈಲಾಸ' ಮಾದಾರ ಧೂಳಯ್ಯ ಅಟ್ಟೆಯನ್ನು ಚುಚ್ಚುವ ತನ್ನ ಕಾಯಕದಲ್ಲಿ ನಿರತನಾಗಿದ್ದಾಗ ಪರಶಿವನೇ ಪ್ರತ್ಯಕ್ಷನಾಗಿ ಬಂದರೂ ಲಕ್ಷಿಸದಷ್ಟು ಕಾಯಕ ನಿಷ್ಠೆ ಮೆರೆದವನು; ಶಿವನಿಗೆ ನಿನ್ನ ಭಕ್ತರ ಠಾವಿನಲ್ಲಿಗೆ ಹೋಗಿ ಮುಕ್ತಿಯ ಮಾಡು....ರಜತದ ಬೆಟ್ಟದ ಮೇಲಕ್ಕೆ ನಿನ್ನ ಭಕ್ತರ ಮುಕ್ತಿಯ ಮಾಡು' ಎಂದು ಹೇಳುವನು (ಸಪುವ. ೧ ವ. ೧೭೧೨). ಮನಸಂದ ಮಾರಿತಂದೆಯು 'ಕಾಯವಿಡಿದಿಹನ್ನಬರ ಶಿವಭಕ್ತಂಗೆ ಕಾಯಕವೆ ಕೈಲಾಸ. ಕಾಯಕವಿಲ್ಲದವನ ಅರಿವು ಮಾಯವಾಗಿತ್ತು. ಅಡುಗೂಲಿಯ ಮನೆಯಂತೆ ಗಡಿಗೆಯ ಗಂಜಿಯಾಸೆಬೇಡ. ಕೊಡುವರೆಂದೊಬ್ಬರ ಮನೆಗೆ ಅಡಿಗಡಿಗೆ ಹೋಗ ಬೇಡ' ಎಂದು ಎಚ್ಚರಿಸುವಷ್ಟು ವಿವೇಕಶಾಲಿ; ಸ್ವಾಭಿಮಾನಿ (ಸಪುವ. ೧ ವ.೧೩೩೪).

ತಮ್ಮ ವೃತ್ತಿಯ ಬಗೆಗೆ ಯಾರಿಗೇ ಆಗಲಿ ಅಳುಕಿಲ್ಲ. ಡಕ್ಕೆಯ ಬೊಮ್ಮಣ್ಣ ಮೊರದಲ್ಲಿ ಮಾರಿಯ ಹೊತ್ತುಕೊಂಡು ಬಂದು ಡಕ್ಕೆಯನ್ನು ನುಡಿಸುತ್ತಾ ಮಾರಿಯನ್ನು ಕುಣಿಸುವನು. ಅವನಿಗೆ ತನ್ನ ವೃತ್ತಿಯ ಬಗೆಗೆ ಸಂಕೋಚವಿಲ್ಲ. 'ತನುವೆಂಬ ಮೊಱದಲ್ಲಿ ಮಾಯಾಗುಣವೆಂಬ ಮಾರಿಯ ಹಿಡಿದು ರಾಜಸ ತಾಮಸ ವೆಂಬ ಕತ್ತಿ ಬಟ್ಟಲುಗಳನ್ನು ಕೈಯಲ್ಲಿ ಹಿಡಿದು ಪ್ರಳಯ ಸಂಹಾರವೆಂಬ ಬಳೆಯನ್ನು ಕೈಗೆ ಧರಿಸಿ ಅಂಗದ ಮನೆಯ ಬಾಗಿಲಲ್ಲಿ ಕೊಂಡು ಬಂದಿದ್ದೇನೆ. ಬಲ್ಲವರಿಕ್ಕಿ ಅಱಿಯದವರೆಲ್ಲರೂ ಸುಮ್ಮನಿರಿ' ಎಂದು ಅವನು ಎಚ್ಚರಿಸುವನು (ಸಪುವ. ೧ ವ. ೮೩೪). ಮಾದಾರ ಚೆನ್ನಯ್ಯ, ತುರುಗಾಹಿ ರಾಮಣ್ಣ, ಮಾದಾರ ಧೂಳಯ್ಯ, ಹೆಂಡದ ಮಾರಯ್ಯ, ಒಕ್ಕಲ ಮುದ್ದಯ್ಯ, ಬಹುರೂಪಿ ಚೌಡಯ್ಯ, ಮೇದರ ಕೇತಯ್ಯ, ಕನ್ನಡಿ ಕಾಯಕದ ಅಮ್ಮಿದೇವಯ್ಯ, ಕಾಮಾಟದ ಭೀಮಣ್ಣ ಬಾಚಿಯ ಕಾಯಕದ ಬಸವಣ್ಣ, ಬೊಕ್ಕಸದ ಚಿಕ್ಕಣ್ಣ, ಕಂಬದ ಮಾರಿತಂದೆ, ಕೀಲಾರದ ಭೀಮಣ್ಣ, ಸೂಜಿಯ ಕಾಯಕದ ರಾಮಿತಂದೆ, ವೈದ್ಯ ಸಂಗಣ್ಣ —ಹೀಗೆ ಇವರೆಲ್ಲರೂ ತಮ್ಮ ತಮ್ಮ ವೃತ್ತಿಯ ಬಗೆಗೆ ಅಭಿಮಾನವಿರುವವರೇ. ಅವರವರ ವೃತ್ತಿ. ಅವರವರ ಹೆಸರಿನೊಂದಿಗೇ ಬೆಸೆದುಕೊಂಡಿದೆ. ಇವರೆಲ್ಲರೂ ತಮ್ಮ ಪರಿಭಾಷೆಯಲ್ಲಿಯೇ ತಮ್ಮ ಅನುಭವಗಳನ್ನು ರೂಪಕವಾಗಿ ವ್ಯಕ್ತಪಡಿಸಿರುವುದು ಗಮನಾರ್ಹ ಸಂಗತಿ. ಕೆಳವರ್ಗದ ಸಾಮಾನ್ಯನೊಬ್ಬ ಹೀಗೆ ತನ್ನ ಕಾಯಕದ ಪರಿಭಾಷೆಯಲ್ಲೇ ತನ್ನ ಅನುಭವ ವನ್ನು ಅರ್ಥಪೂರ್ಣವಾಗಿ ನಿರೂಪಿಸಿರುವುದು ಕನ್ನಡ ಸಾಹಿತ್ಯದಲ್ಲಿ ಇದೇ ಮೊದಲು.

ಕೆಳವರ್ಗದ ವಚನಕಾರರು ತಮಗೆ ದೊರೆತ ಸಾಮಾಜಿಕ ಸಮಾನತೆಯಷ್ಟರಿಂದಲೇ ತೃಪ್ತರಾಗಲಿಲ್ಲ. ಅವರು ಪರಿಶುದ್ಧ ಜೀವನವನ್ನು ನಡೆಸಹೊರಟರು. ಹುಸಿ, ಹಿಂಸೆ, ಮೋಸ, ವಂಚನೆ, ಡಾಂಭಿಕತೆ, ಪರಸ್ತ್ರೀ ಚಿಂತೆ—ಇವಾವೂ ತಮ್ಮ ಜೀವನದಲ್ಲಿ ನೆಮ್ಮದಿಗೆ ಭಂಗ ತರಬಾರದೆಂದು ಇವನ್ನು ವರ್ಜಿಸುವ, ಆದರ್ಶ ಬಾಳುವೆ ನಡೆಸುವ ಧ್ಯೇಯವನ್ನು ಅವರು ಹೊಂದಿದ್ದರು. ಇವನ್ನು ಇತರರಲ್ಲಿ ಕಂಡಾಗ, ಹಸನಾದ ಬಾಳುವೆಗೆ ಇವು ಅಡ್ಡಿ ಎಂಬುದನ್ನು ತಿಳಿದೂ ಜನ ಇವುಗಳಿಗೆ ದಾಸರಾಗುವುದನ್ನು ನೋಡಿದಾಗ ಅವರು ವ್ಯಗ್ರರಾದರು. ಸುತ್ತಣ ಪರಿಸರದಲ್ಲಿ ಜಾತಿಭೇದ, ಶೋಷಣೆ, ಅಜ್ಞಾನ, ಮೂಢನಂಬಿಕೆ ಅರ್ಥವಿಹೀನ ಆಚರಣೆ ಇತ್ಯಾದಿಗಳನ್ನು ಕಂಡ ಅವರು ಅವನ್ನು ನಿವಾರಿಸುವ ಸಲುವಾಗಿ ಉಗ್ರವಾಗಿ ಟೀಕಿಸುವ ಮನೋಧೈರ್ಯವನ್ನು ಪ್ರಕಟಿಸಿದರು. ಸಾಮಾಜಿಕ ಅನ್ಯಾಯಗಳ ಬಗೆಗೆ ಅವರು ಸಿಡಿದೆದ್ದರು. ಕೆಳವರ್ಗದಿಂದ ಬಂದ ಅವರಲ್ಲಿ ಬಂಡಾಯದ ಮನೋಭಾವವಿದೆ. ಸಮಾಜದ ಆರೋಗ್ಯಕ್ಕೆ ಕೆಡುಕಾಗಿ ಬರುವ ಏನನ್ನೇ ಆಗಲಿ ಅವರು ಖಂಡಿಸುವರು. ಹೊಸ ಆದರ್ಶದ ಸಮಾಜವನ್ನು ಕಟ್ಟಹೊರಟ ಅವರಿಗೆ ಮೇಲುವರ್ಗದವರ ಶೋಷಣೆ, ಮೋಸ, ವಂಚನೆ ಅಪಾಯಕಾರಿಯಾಗಿ ಕಂಡುಬರುತ್ತದೆ. ಅವನ್ನು ನೋಡಿದಾಗ, ಅವುಗಳ ಅನುಭವದಿಂದ ಘಾಸಿಗೊಂಡಾಗ ಅವರು ಸಿಡಿದೇಳುತ್ತಾರೆ. ಅಂತಹ ಮನಃಸ್ಥಿತಿಯಲ್ಲಿ ಜೀವತಳೆದ ವಚನಗಳಲ್ಲಿ ಅವರ ಕೋಪ-ತಾಪ ಒರಟೊರಟಾಗಿ ಹೊಮ್ಮಿ ಬಂದಿದೆ. ಅವರ ಮಾತಿನ ರೂಕ್ಷತೆಗೆ ಕಾರಣವಾದ ಹಿನ್ನೆಲೆಯನ್ನು ನಾವು ಪರಿಭಾವಿಸಬೇಕು. ಆಗ ಅವರ ಮನದ ತುಡಿತವನ್ನು ನಾವು ಗ್ರಹಿಸಲು ಸಾಧ್ಯ. ಅಂಬಿಗರ ಚೌಡಯ್ಯ, ಮಡಿವಾಳ ಮಾಚಯ್ಯ—ಇವರೇ ಮೊದಲಾದ ಕೆಲವರ ಬಂಡಾಯ ಮನೋಭಾವವನ್ನು, ಉಗ್ರವಾದ ಪ್ರತಿಕ್ರಿಯೆಯನ್ನು ನಾವು ಸರಿಯಾದ ರೀತಿಯಲ್ಲಿ ಸ್ವೀಕರಿಸದಿದ್ದರೆ ಅವರಿಗೆ ಅನ್ಯಾಯ ಬಗೆದಂತಾಗುತ್ತದೆ. ಕೆಳವರ್ಗದ ಈ ಜನ ಎಚ್ಚೆತ್ತ ಪರಿಸರದಲ್ಲಿ ಸ್ವತಂತ್ರರಾಗಿ ವಿಚಾರಮಾಡಿ ತಮಗೆ ಅನಿಸಿದ್ದನ್ನು ಮುಚ್ಚುಮರೆಯಿಲ್ಲದೆ ನಿರ್ಭೀತರಾಗಿ ಹೇಳಿದ್ದು ೧೨ನೇ ಶತಮಾನದ ಸಾಮಾಜಿಕ ಕ್ರಾಂತಿಯಲ್ಲಿ ಅತ್ಯಂತ ಮಹತ್ವಪೂರ್ಣವಾದ ವಿಷಯ.

ವೇದ, ಶಾಸ್ತ್ರ, ಆಗಮ, ಉಪನಿಷತ್ತು, ಪುರಾಣ ಇವೆಲ್ಲವೂ ಉತ್ತಮರ ಸೊತ್ತಾಗಿದ್ದಾಗ, ಇವುಗಳನ್ನೇ ಸಮಯೋಚಿತವಾಗಿ ಹೇಳಿ ಸಮರ್ಥಿಸಿಕೊಳ್ಳುವ; ಇವು ಅನಾದಿ, ದೇವಸೃಷ್ಟಿ ಇಲ್ಲಿ ಬಂದಿರುವುದೇ ಪ್ರಮಾಣವೆಂದು ವಾದಿಸುವ ಮೇಲುವರ್ಗದವರನ್ನು ವಚನಕಾರರು ಖಂಡಿಸಿರುವರು. ನಾದದ ಬಲದಿಂದ ವೇದ, ಮಾತಿನ ಬಲದಿಂದ ಶಾಸ್ತ್ರ, ಪಾಷಾಣದ ಬಲದಿಂದ ಸಮಯಗಳೇ ಹೊರತು ಇವಾವೂ ಸ್ವಯಂಭುವಲ್ಲ ಎಂದು ಅಂಬಿಗರ ಚೌಡಯ್ಯ ಹೇಳುತ್ತಾ ಹೀಗೆ ಮಾತಿನ ಬಣಬೆಯ

ಮುಂದಿಟ್ಟುಕೊಂಡು ಪರಮಾತ್ಮನನ್ನು ಕಾಣಲು ಸಾಧ್ಯವೆ ? ಆತ 'ಆತ್ಮತಿಷ್ಠದ್ದಶಾಂಗುಲ'ನಲ್ಲವೆ ? ಎಂದು ಪ್ರಶ್ನಿಸುವನು (ವ. ೪). ಕಲ್ಲುಗಳಲ್ಲಿ ದೇವತೆಗಳಿಗೆ ಆಕಾರ ಮೂಡಿಸಿ, ಆ ದೇವತೆಗಳಿಂದ ಧರ್ಮಗಳನ್ನು ಸೃಷ್ಟಿಸಿರುವ ನಮ್ಮ ಪೂರ್ವಿಕರ ಧೋರಣೆಯನ್ನು ಅಂಬಿಗರ ಚೌಡಯ್ಯ ಅಲ್ಲಗಳೆದಿರುವುದು, ಸಾಕಾರ ಪೂಜೆಮಾಡುವರನ್ನು ತೀವ್ರವಾಗಿ ವಿರೋಧಿಸಿರುವುದು ಅವನ ಪ್ರಗತಿಪರ ಆಲೋಚನೆಗೆ ಸಾಕ್ಷಿಯಾಗಿದೆ. ಅರಳಿಯ ಮರ, ವಿಷ್ಣುಕಾಂತಿ, ಮುತ್ತಕ, ತೊಳಸಿ--ಇವುಗಳನ್ನು ಪೂಜಿಸಿ ನಮಸ್ಕರಿಸುವ ವೈದಿಕರನ್ನು ಕಂಡು 'ಎಲ್ಲಿ ಭೋ! ಎಲ್ಲಿ ಭೋ!! ಹೊಡೆವಡುವ ದೈವಗಳೆಲ್ಲಾ ಗಿಡಮರವಾಗಿ ಹೋದುವಲ್ಲಾ ! ಎಂದು ಚೌಡಯ್ಯ ವ್ಯಂಗ್ಯವಾಡಿರುವನು (ವ. ೧೬೬). 'ವೇದ ವಿಪ್ರರಬೋಧೆ ಶಾಸ್ತ್ರ ಸಂತೆಯ ಮಾತು, ಪುರಾಣ ಪುಂಡರ ಗೋಷ್ಠಿ, ಆಗಮ ಅನೃತದ ನುಡಿ, ತರ್ಕ–ವ್ಯಾಕರಣ ಕವಿತ್ವಪ್ರೌಢಿ....' ಎಂದು ಮಡಿವಾಳ ಮಾಚಿದೇವ ಹೇಳಿದರೆ, ಸಂಗಮೇಶ್ವರ ಅಪ್ಪಣ್ಣನು ವೇದ ನಾಲ್ಕನು ಓದಿದಡೇನು ? ಶಾಸ್ತ್ರವ ನೆಟಿಕೆ ಕೇಳಿದಡೇನು ? ಶಿವಜ್ಞಾನಹೀನರು ಬಲ್ಲರೆ ಭಕ್ತಿಯ ಪಥವನು....ಕ್ಷೀರದೊಳಗಣ ಸಟ್ಟುಗ ಸವಿಸ್ವಾದುಗಳ ಬಲ್ಲುದೆ ? 'ಓದಿದ ನಿರ್ಣಯವ ನಮ್ಮ ಮಾದಾರ ಚೆನ್ನಯ್ಯ, ಮಡಿವಾಳಯ್ಯ, ಡೋಹರ ಕಕ್ಕಯ್ಯನವರು ಬಲ್ಲರು' ಎಂದು ಹೇಳುವನು.

ಅರಿವು ಓದಿನಿಂದ ಬರುವಂತಹದಲ್ಲ, ವೇದ ಆಗಮ ಪುರಾಣಾದಿಗಳೇ ಜ್ಞಾನದ ಪರಮಸೀಮೆಗಳಲ್ಲ ಎಂಬುದನ್ನು ವಚನಕಾರರು ಮನಗಂಡಿದ್ದರು. ವೇದಗಳನ್ನು ಅಸ್ಪೃಶ್ಯರು ಕೇಳಕೂಡದೆಂದು ಸಂಪ್ರದಾಯವಾದಿಗಳು ಬೆದರಿಕೆಯೊಡ್ಡಿದಾಗ ಮಡಿವಂತಿಕೆಗೆ ಒಳಗಾದ ಆ ಜ್ಞಾನದ ಹಂಗು ತಮಗೆ ಬೇಡವೆಂದು ಕೆಳವರ್ಗದ ಜನರು ತಿರಸ್ಕರಿಸಿದ್ದರಲ್ಲಿ ಅರ್ಥವಿದೆ, ನ್ಯಾಯವಿದೆ. 'ವೇದವ ನುಡಿವಲ್ಲಿ ವಿಪ್ರರು ಮತ್ತಾರೂ ಶೂದ್ರಜಾತಿ ಕೇಳದಂತೆ ನುಡಿವರದೇತಕ್ಕೆ?' (ಸಪುವ. ೧ ವ. ೫೩೮) ಎಂದು ಅರಿವಿನ ಮಾರಿತಂದೆ ಪ್ರಶ್ನಿಸಿ 'ನಿಕ್ಷೇಪವ ನಿಕ್ಷೇಪಿಸುವಲ್ಲಿ ಮತ್ತಾರೂ ಅರಿಯದಂತೆ ಇರಿಸಬೇಕೆಂಬುದಕ್ಕಿಂದವು ಕಡೆಯೆ ಶಿವತತ್ವ ಪರಮಜ್ಞಾನ ? (ಸಪುವ. ೧ ವ. ೫೩೯) ಎಂದಿರುವನು. (ವಿಪ್ರರು ವೇದವನ್ನು ಶೂದ್ರರು ಕೇಳದಂತೆ ಮಾಡಿದರು. ಆದರೆ ಶಿವಶರಣರು ಶಿವತತ್ವವನ್ನು ಮಡಿವಂತಿಕೆಯಿಂದ ದೂರವಿರಿಸಿದರು. ಜ್ಞಾನ ಉತ್ತಮರ ಸೊತ್ತಲ್ಲ, ಅದು ಎಲ್ಲರಿಗೂ ಸಿಗುವಂತಾಗಬೇಕೆಂದು ಬಸವಾದಿ ಶರಣರು ವಾದಿಸಿದರು. ಅಸ್ಪೃಶ್ಯರು ಬಸವಾದಿ ಶರಣರ ಆಕರ್ಷಣೆಗೆ ಒಳಗಾದುದಕ್ಕೆ ಇದೂ ಒಂದು ಕಾರಣ.) ಪುರೋಹಿತವರ್ಗ ಮಾತಿನ ಅದ್ವೈತವ ಕಲಿತು ಅದನ್ನು ಅರಿಯದ ಜನರಿಗೆ ತಿಳಿಯದ ಸಂಸ್ಕೃತದಲ್ಲಿ ಬೋಧಿಸ ಹೊರಟಿದ್ದನ್ನು ನಗೆಯ ಮಾರಿತಂದೆ 'ಕಲ್ಲಿಯ ಹಾಕಿ ನೆಲ್ಲವ ತಳಿದು ಗುಬ್ಬಿಯ ಸಿಕ್ಕಿಸುವ ಕಳ್ಳನಂತೆ' ಎಂದು ವ್ಯಂಗ್ಯವಾಡಿರುವನು. ಪುರೋಹಿತ ವರ್ಗದವರು ನಡೆಸುವ ಮೋಸವನ್ನು

ರೂಪಕವೊಂದರಲ್ಲಿ ನಗೆಯ ಮಾರಿತಂದೆ ಹೇಳುತ್ತಾ ವಾಗದ್ವೈತವಾಗಲಿ, ಸಂಸ್ಕೃತವಾಗಲಿ ಅರಿಯದ ಜನರೆಂಬ ಹಕ್ಕಿಗಳನ್ನು ಬಲೆಯಲ್ಲಿ ಹಿಡಿಯಲು ಬಳಸುವ ಅಕ್ಕಿಕಾಳು ಎಂದಿರುವನು. ಮೇಲಿಂದ ಮೇಲೆ ಸಂಸ್ಕೃತ ಶ್ಲೋಕಗಳನ್ನು ಉಲ್ಲೇಖಿಸುತ್ತಾ ಅದ್ವೈತವನ್ನು ಬೋಧಿಸುವ ಪುರೋಹಿತವರ್ಗದವರ ಮಾತಿನ ಮೋಡಿಗೆ ಸೆರೆಯಾದ ಸಾಮಾನ್ಯನ ಸ್ಥಿತಿಯನ್ನು ಅತ್ಯಂತ ವಾಸ್ತವವಾಗಿ 'ಮತ್ಸ್ಯದ ವಕ್ತ್ರದಲ್ಲಿ ಗ್ರಾಸವ ಹಾಕುವಂತೆ' ಎಂಬ ಮತ್ತೊಂದು ರೂಪಕದ ಮೂಲಕ ನಗೆಯ ಮಾರಿತಂದೆ ಹೇಳಿರುವನು (ಸಪ್ರವ ೨ ವ. ೧೩೪೪). ಈತ ಬಳಸಿರುವ ಎರಡೂ ರೂಪಕಗಳು ಧ್ವನಿಪೂರ್ಣವಾಗಿವೆ. ಈ ಬಗೆಯ ವಂಚನೆಯನ್ನು ತೀವ್ರವಾಗಿ ಖಂಡಿಸಿದವರಲ್ಲಿ ಚೌಡಯ್ಯನೂ ಒಬ್ಬ. 'ವಚನಾರ್ಥವ ಕಂಡಹರೆಂದು ರಚನೆಯ ಮರೆಮಾಡಿ ನುಡಿಯಲೇತಕ್ಕೆ ? ದಾರಿಯಲ್ಲಿ ಸರಕು ಮಱೆಯಲ್ಲದೆ, ಮಾಱುವಲ್ಲಿ ಮಱೆಯುಂಟೆ ? ತಾನಱಿವಲ್ಲಿ ಮಱೆಯಲ್ಲದೆ ಬೋಧೆಗೆ ಮಱೆಯಿಲ್ಲಾ' (ವ. ೫೭) ಎಂಬ ಅವನ ಮಾತು ಮಡಿವಂತ ವಿಪ್ರರಿಗೇ ಹೇಳಿದಂತಿದೆ.

ಆದಾರ ಚೆನ್ನಯ್ಯ ಚಾತುರ್ ವರ್ಣಗಳನ್ನು ಒಪ್ಪಿಕೊಂಡರೂ ನೀಚ ಶ್ರೇಷ್ಠ ಎಂಬ ಎರಡೇ ಕುಲ ಇರುವುದು, ಹೊಲೆ ಹದಿನೆಂಟು ಜಾತಿಯೆಂಬ ಕುಲವಿಲ್ಲ ಎನ್ನುವನು (ಸಪುವ. ೩ ಪು. ೨೪೪). ಅವನ ಪ್ರಕಾರ "ಬ್ರಹ್ಮವನಱಿದಲ್ಲಿ ಬ್ರಾಹ್ಮಣ, ಸರ್ವಜೀವ ಹತಕರ್ಮಕ್ಕೊಳಗಾಗಿದ್ದಲ್ಲಿ ಸಮಗಾಱ ! ನಡೆನುಡಿ ಸಿದ್ಧಾಂತವಾದಲ್ಲಿ ಕುಲ–ಹೊಲೆ ಸೂತಕವಿಲ್ಲ. ನುಡಿ ಲೇಸು, ನಡೆಯಧಮವಾದಲ್ಲಿ ಅದೆ ಬಿಡುಗಡೆಯಿಲ್ಲದ ಹೊಲೆ. ಕಳವು ಪಾರದ್ವಾರಂಗಳಲ್ಲಿ ಹೊಲಬನಱಿಯದೆ ಕೆಟ್ಟು ನಡೆವುತ್ತ ಮತ್ತೆ ಕುಲಜರೆಂಬ ಒಡಲವರುಂಟೆ ? ಆಚಾರವೆ ಕುಲ, ಅನಾಚಾರವೆ ಹೊಲೆ, ಇಂತೀ ಉಭಯವ ತಿಳಿದಱಿಯಬೇಕು" (ಸಪುವ. ೩ ಪು. ೨೪೭). ಚಾತುರ್ ವರ್ಣ ವ್ಯವಸ್ಥೆಯಲ್ಲಿ ಚೌಡಯ್ಯ ಪುರೋಹಿತ ವರ್ಗದವರ ವಂಚನೆಯನ್ನು ಕಾಣುವನು. 'ಕುಱಿ ಕೋಳಿ ಕಿಱುಮೀನ ತಿಂಬವರ ಊರೊಳಗೆ ಇರು ಎಂಬರು. ಅಮೃತಾನ್ನವ ಕಱೆವ ಗೋವ ತಿಂಬವರ ಊರಿಂದ ಹೊರಗಿರು ಎಂಬರು ?' (ವ. ೧೯೮) ಎನ್ನುವಲ್ಲಿ ಉತ್ತಮ–ಅಧಮ ಎಂದು ನಿರ್ಣಯಿಸುವ ಸಾಮಾಜಿಕ ವ್ಯವಸ್ಥೆಯ ಬಗೆಗಿನ ಅವನ ವ್ಯಂಗ್ಯವನ್ನು ಕಾಣಬಹುದು.

ವರ್ಣವ್ಯವಸ್ಥೆಯಿಂದಾಗಿ ಊರ ಹೊರಗೆ ಇರಬೇಕಾಗಿ ಬಂದ ಅಸ್ಪೃಶ್ಯರು ಹರಿಗೋಲು, ಚೊಕ್ಕಣ, ಸಿದಿಕೆ, ಬಾರುಕೋಲು, ಪಾದರಕ್ಷೆ, ಮದ್ದಳೆ, ಬುದ್ದಲಿಕೆ ಮೊದಲಾದ ಎಲ್ಲರೂ ಬಳಸುವ ವಸ್ತುಗಳನ್ನು ಸಿದ್ಧಮಾಡುವರು. ಇವರು ಮಾಡಿದ ವಸ್ತು ಬಳಕೆಗೆ ಬೇಕು ಆದರೆ ಇವರ ಸಂಪರ್ಕ ಬೇಡ ಎನ್ನುವ ಉತ್ತಮರು 'ಹೊಲೆಯರು' ಎನ್ನುವ ಚೌಡಯ್ಯ ಇಂತಹವರನ್ನು ಉದ್ದನ ಚಮ್ಮಾಳಿಗೆಯ ತೆಕ್ಕೊಂಡು

ಬಾಯ ಕೊಲ್ಲುವೆನು' ಎಂದು ಆರ್ಭಟಿಸಿರುವನು (ವ. ೧೯೮). ಹೊಲೆಯ ಹೊಲೆಯ ಎಂದು ಹೀನೈಸಿ ನುಡಿಯುವವರನ್ನು 'ಹೊಲೆಯ ಹೊಲೆಯ ಎಂದಡೆ ಹೊಲೆಯ ರೆಂತಪ್ಪರಯ್ಯಾ ? ಹೊಲೆಯ ಹೊಲಗೇರಿಯಲ್ಲಿರುವನು ಊರೊಳಗಿಲ್ಲವೆ ಅಯ್ಯಾ ಹೊಲೆಯರು ? ಎಂದು ಚೌಡಯ್ಯ ಪ್ರಶ್ನಿಸಿ, ತಾಯಿಗೆ ಬೈದವನು, ತಂದೆಗೆ ಉತ್ತರ ಕೊಟ್ಟವನು, ತಂದೆಗೆ ಬೈದವನು, ಕೊಡುವ ದಾನಕ್ಕೆ ಅಡ್ಡಬಂದವನು, ನಡೆವ ದಾರಿಗೆ ಮುಳ್ಳು ಹಚ್ಚಿದವನು. ಬ್ರಾಹ್ಮಣನ ಕುತ್ತಿಗೆಯ ಕೊಯ್ದವನು, ಹತ್ತು ಆಡಿದರೆ ಒಂದೂ ನಿಜವಿಲ್ಲದವನು. ಚಿತ್ತದಲ್ಲಿ ಪರಸತಿಯ ಬಯಸಿದವನು, ಲಿಂಗಮುದ್ರೆಯ ಕಿತ್ತವನು, ಲಿಂಗವ ಬಿಟ್ಟು ತಿರುಗುವವನು, ಧರ್ಮವ ಮಾಡದವನು, ಬಸವನ ಕೊಂದವನು, ಬಸವನ ಇರಿದವನು, ಲಿಂಗಪೂಜೆಯ ಮಾಡದವನು–ಹೀಗೆ ಇವ ರೆಲ್ಲರೂ ಹೊಲೆಯರೆನ್ನುವನು (ವ. ೨೧೯). ಇಂತಹ ಹೊಲೆಯರು ಊರ ತುಂಬ ಇರುವಾಗ ಹೊಲಗೇರಿಯವರಿಗೆ ಹೊಲೆಯರೆನಬಹುದೆ ? ಎಂದು ಕೇಳುವನು (ವ. ೨೧೯). ಹೊಲೆಯರು ಮಾಡಿದ ಹರಿಗೋಲು, ಚಮ್ಮಾವುಗೆ, ಮಿಣಿ, ಬಾರು ಕೋಲು, ಮೃದಂಗ, ನಗಾರಿ, (ತುಪ್ಪತುಂಬಲು) ಸಿದ್ದಲಿಕೆ, (ಎಣ್ಣೆತುಂಬಲು) ಬುದ್ದಲಿಕೆ–ಇವೆಲ್ಲವೂ ಉತ್ತಮರಿಗೆ ಬೇಕು. ಸಿದ್ದಲಿಕೆಯ ತುಪ್ಪ ಬುದ್ದಲಿಕೆಯ ಎಣ್ಣೆ ಇವನ್ನು ಶೀಲವಂತರು ಉಪಯೋಗಿಸಿಯೂ ಜಗಳ ಬಂದಾಗ ನನ್ನ ಕುಲ ಹೆಚ್ಚು ನಿನ್ನ ಕುಲ ಕಡಿಮೆ ಎಂದು ಬಡಿದಾಡುವುದನ್ನು ನೋಡಿದ ಚೌಡಯ್ಯ ಈ ಕುನ್ನಿ ನಾಯಿಗಳ ಮೋರೆ ಮೋರೆಯ ಮೇಲೆ ನಮ್ಮ ಪಡಿಹಾರಿ ಉತ್ತಣ್ಣಗಳ ವಾಮ ಪಾದುಕೆಯ ಕೊಂಡು ಅವರ ಅಂಗುಳ ಮೆಟ್ಟಿ ಫಡಫಡನೆ ಹೊಡಿ' ಎನ್ನುವನು (ವ. ೨೧೯).

'ಚಾಂಡಾಲನಾದರೇನು ಶಿವಭಕ್ತನೇ ಕುಲಜನು' ಎಂದು ಸಂಗಮೇಶ್ವರ ಅಪ್ಪಣ್ಣ ಹೇಳುವನು (ಸಪುವ. ೩ ಪು. ೨೯). ಭಕ್ತರು ಮನೆಗೆ ಬಂದರೆ ಸಹಜವಾಗಿರಬೇಕು. ಅಂಜದೆ ಅಳುಕದೆ, ನಡುಗುತ್ತಿರದೆ ತಮ್ಮ ಶುದ್ಧಿ ತಾವಿರಬೇಕು. ಸ್ವಾಮಿ–ಭೃತ್ಯಭಾವ ದಲ್ಲಿದ್ದರೆ 'ಬಸವ ಪ್ರಿಯ ಕೂಡಲ ಚನ್ನಸಂಗ ಹಲ್ಲ ಕಳೆವ' ಎಂದು ಅಪ್ಪಣ್ಣ ಎಚ್ಚರಿ ಸುವನು (ಸಪುವ. ೩ ಪು. ೩೦೫). ಮಡಿವಾಳ ಮಾಚಿದೇವ ಬ್ರಹ್ಮನನ್ನು ದೇವ ರೆಂದು ಆರಾಧಿಸಿದ್ದರಿಂದ ಗೌತಮ, ಕರ್ಣ, ನಾಗಾರ್ಜುನ, ದಕ್ಷ–ಇವರಿಗಾದ ಗತಿ ಯನ್ನೂ ; ವಿಷ್ಣುವನ್ನು ದೇವರೆಂದು ಆರಾಧಿಸಿದ್ದರಿಂದ ಬಲಿ, ಪಾಂಡವರು, ಪರಶು ರಾಮ, ವ್ಯಾಸ–ಇವರಿಗೊದಗಿದ ಸ್ಥಿತಿಯನ್ನೂ ಉದಹರಿಸಿ 'ಮಾಯಿರಾಣಿ ದೈವ ವೆಂದು ಆರಾಧಿಸಿದ ಕಾರಣ ತಲೆಯಲ್ಲಿ ಕೆರವ ಕಟ್ಟಿ, ಕೊರಳಲ್ಲಿ ಕವಡೆಯ ಕಟ್ಟಿ, ಬೇವ ನುಟ್ಟು ಚಾವಡಿ ಅರಿಯೆ ಲಜ್ಜೆ ಹೋಯಿತ್ತು. ಮುಂದೆ ಭೈರವ ದೇವರೆಂದು ಆರಾಧಿಸಿದ ಕಾರಣ ಕುರುಳು ಬೆರಳ ಖಂಡಿಸಿ ತುತ್ತುತುತ್ತಿಗೆ ಅಂತರಂಗ ಬಹಿರಂಗ ವಾಯಿತ್ತು. ಮುಂದೆ ಜಿನನ ದೈವವೆಂದು ಆರಾಧಿಸಿದ ಕಾರಣ ಜೈನ ಮಾಡಿದ ಕರ್ಮ ನಿಷ್ಕರ್ಮವಾದುದಾಗಿ ನರರ ಹಾಡಿದರೆ ಗತಿಯಿಲ್ಲ....' ಎಂದು ಹೇಳಿ ಕೊನೆ

ಯಲ್ಲಿ ಮಾರಿ ಮಸಣಿ ಮೈಲಾರ ಮೊದಲಾದ ಕ್ಷುದ್ರ ದೇವತೆಗಳು ಸಂಪತ್ತನ್ನು ಆಯುಃಶ್ಯವನ್ನು ಕೊಡಬಲ್ಲರೆ ? ಎಂದು ಕೇಳುವನು (ವ. ೧೪೧).

ವೀರಶೈವ ಧರ್ಮದಲ್ಲಿ ಗುರುವಿನ ಸ್ಥಾನ ಮಹತ್ವದ್ದು. ಮಂತ್ರೋಪದೇಶ ಮಾಡಿ ಶಿಷ್ಯನನ್ನು ಶುದ್ಧೀಕರಿಸಿ, ಅವನ ಅಜ್ಞಾನವನ್ನು ನಿವಾರಿಸಿ, ಇಷ್ಟಲಿಂಗವನ್ನು ಅನುಗ್ರಹಿಸಿ ಅವನನ್ನು ಉದ್ಧರಿಸುವ ಗುರುವಿನ ಪಾತ್ರ ದೊಡ್ಡದು. ಲಿಂಗಧಾರಣೆ ಯಾಗುವುದರ ಮೂಲಕ ಸಾಮಾಜಿಕವಾಗಿ ದೂರವಿರಿಸಲ್ಪಟ್ಟ ತಾವು ಉತ್ತಮರೆನ್ನಿಸುವೆವೆಂಬ ಭಾವಭ್ರಮೆಯಿಂದ ಹನ್ನೆರಡನೆಯ ಶತಮಾನದಲ್ಲಿ ಕೆಳವರ್ಗಕ್ಕೆ ಸೇರಿದವರಲ್ಲಿ ಬಹಳ ಮಂದಿ ಲಿಂಗಧಾರಣೆಗೆ ಹಾತೊರೆದರು. ಈ ಶುದ್ಧೀಕರಣಕ್ರಿಯೆ ಅಂತರಂಗದ ಒತ್ತಾಸೆಯಿಂದ ಆಗಬೇಕಿತ್ತು. ಇದಕ್ಕೆ ಅರ್ಹರಾದವರು, ಅರ್ಹರಲ್ಲದವರು ಎಲ್ಲರೂ ಸಾಲುಗಟ್ಟಿದರು. ಇದರ ಫಲವಾಗಿ ಆಸೆ ಆಮಿಷಗಳಿಗೆ ಒಳಗಾದ ಗುರು ಯೋಗ್ಯವಲ್ಲದ ಶಿಷ್ಯನಿಗೂ ಲಿಂಗವನ್ನು ಅನುಗ್ರಹಿಸ ಹೊರಟನು. ಇಂತಹ ಗುರುವನ್ನು ಕಂಡ ಚೌಡಯ್ಯ 'ಗುರು–ಲಿಂಗ–ಜಂಗಮವೆಂದಱಿಯದ ಗೊಡ್ಡುಗಳ ಶಿಷ್ಯರ ಮಾಡಿಕೊಂಬ ಹೆಡ್ಡ ಜೀವಿಗಳನೇನೆಂಬೆನಯ್ಯಾ ? ಅಚಾರ–ಅನಾಚಾರದ ಭೇದವ ನಱಿಯದ ಹೆಡ್ಡ ಮಾನವರಿಗೆ ಉಪದೇಶವ ಕೊಡುವ ಮತಿಭ್ರಷ್ಟರನೇನೆಂಬೆನಯ್ಯಾ? ಅವನ ಅಜ್ಞಾನವಳಿಯದೆ, ಅವನ ನಡೆ–ನುಡಿ ಹಸನು ಮಾಡದೆ, ಅವನ ಆದಿ ಅಂತ್ಯವ ತಿಳಿಯದೆ ಧನಧಾನ್ಯದಾಸೆಗೆ ಶಿವದೀಕ್ಷೆಯ ಮಾಡುವನೊಬ್ಬ ಗುರುವು ಹುಟ್ಟಂಧಕನೆಂಬೆನಯ್ಯಾ' ಎನ್ನುವನು (ವ. ೫೫). ಗುರುವಿನ ಗುಣವನ್ನು ಲಕ್ಷಿಸದೆ ಅವನಿಂದ ಉಪದೇಶವನ್ನು ಪಡೆದ ಶಿಷ್ಯನನ್ನು ಚೌಡಯ್ಯ ಕೆಟ್ಟಗಣ್ಣವನೆನ್ನುವನು (ವ. ೫೫). ಸಂತೆಗೆ ಹೋಗಿ ಮೂರು ಪಾಕಿಗೆ ಲಿಂಗವನ್ನೂ, ಆರು ಪಾಕಿಗೆ ವಸ್ತ್ರವನ್ನೂ ತಂದು ಲಿಂಗಧಾರಣೆ ಹೊಂದಲು ಪ್ರಯತ್ನಿಸುತ್ತಿದ್ದವರನ್ನು ಚೌಡಯ್ಯ ಕಟುವಾಗಿ ಟೀಕಿಸುತ್ತಾ ಕಟ್ಟಿದವನೂ ಕಟ್ಟಿಸಿಕೊಂಡವನೂ ಕಳ್ಳನಾಯಿಗಳು ಎಂದಿರುವನು. ಅಷ್ಟೇ ಅಲ್ಲ, ಇಂತಹ ಕಳ್ಳ ನಾಯಿಗಳನ್ನು ಹಿಡಿದು ತಂದು ಮೂಗು ಕತ್ತರಿಸಿ ಕುಂಬಾರ ಗುಂಡಯ್ಯನ ಮನೆಯ ಕರಿಕತ್ತೆಯ ಮೇಲೆ ಕೂರಿಸಿ ಊರಲ್ಲೆಲ್ಲಾ ಮೆರೆಯಿಸಿ, ಮಾದಾರ ಹರಳಯ್ಯನ ಮನೆಯ ಹನ್ನೆರಡು ಜೋಡು ಹಳೆಯ ಪಾದರಕ್ಷೆಗಳನ್ನು ತಂದು ಇವರ ಮುದ್ದು ಮುಖದ ಮೇಲೆ ಹೊಡೆಯಬೇಕೆನ್ನುವನು (ವ. ೧೧).

ಶಿಷ್ಯನ ಪೂರ್ವಾಪರಗಳನ್ನು ವಿಚಾರಿಸದೆ ಯೋಗ್ಯನಲ್ಲದವನಿಗೆ ಲಿಂಗವನ್ನು ಕೊಟ್ಟು 'ಬಿನ್ನಾಣದಿಂದ ಪಂಚಪರ್ವವಮಾಡಿ, ನಂಬಿಸಿ ಹಣವ ಕೊಂಬ ಲಿಂಗದರೆಯರ ನೋಡಾ !' ಎಂದು ಮಡಿವಳ ಮಾಚಿದೇವ ತನ್ನ ಆಶ್ಚರ್ಯೋದ್ಗಾರವನ್ನು ತೆಗೆದಿರುವನು (ವ. ೧೪೩). ಲಿಂಗವಂತನಿಗೆ ಮರು ಹುಟ್ಟು ಲಿಂಗೈಕ್ಯನಾದ ಮೇಲೆ

ಇಲ್ಲ. ಇದನ್ನು ತಿಳಿಯದೆ ಸತ್ತು ಮಣ್ಣಾಗಿ ಹೋದ ತನ್ನ ತಾಯಿ ತಂದೆಯರು ಮತ್ತೆ ತನ್ನ ಸಂತಾನ ರೂಪದಲ್ಲಿ ಹುಟ್ಟಿ ಬಂದಿರುವರೆಂದು ಹೇಳುವ, ಹುಟ್ಟಿದ ಮಕ್ಕಳಿಗೆ ಅವರ ಹೆಸರಿಟ್ಟು ಕರೆಯುವ ಲಿಂಗವಂತರನ್ನು ಮಡಿವಾಳ ಮಾಚಿದೇವ ಕಂಡು ತನ್ನ ಆಚ್ಚರಿಯನ್ನು ಪ್ರಕಟಪಡಿಸಿರುವನು (ವ. ೫೮). ಅನ್ಯ ದೈವಗಳನ್ನು ಪೂಜಿಸಿ ನರಕಕ್ಕಿಳಿವ ನರಕ ಜೀವಿಗಳಿಗೆ ಉಪದೇಶ ನೀಡುವ ಗುರುವನ್ನೂ, ಆ ಗುರುವಿನ ಕೈಯಿಂದ ಉಪದೇಶವನ್ನು ಸ್ವೀಕರಿಸಿದ ಶಿಷ್ಯನನ್ನೂ ನೋಡಿ ಮಡಿವಾಳ ಮಾಚಿದೇವ ಇವರಿಬ್ಬರಿಗೂ ಭವನಾಸ್ತಿಯಾಗದೆ ಇಬ್ಬರೂ ಭವಸಾಗರದಲ್ಲಿ ತೇಲುತ್ತ ಮುಳುಗುತ್ತ ಲಿರುವರು ಎನ್ನುವನು. ವ್ರತಭ್ರಷ್ಟ, ಗುರುಘಾತಕ, ವಂದಿಸಿ ನಿಂದಿಸುವವ— ಇಂತಹವರು ಕೊಡುವ ಹೊನ್ನಿಗೆ ಆಸೆಪಟ್ಟು ಅವರ ಮನೆಗೆ ಹೋದರೆ 'ಜಂಬುಕ ತಿಂದ ಹಡುವ (= ಹೊಲಸು) ಮಿಕ್ಕ ಹುಳಿತದ ತಾ ತಿಂದಂತೆ' (ಸಪುವ. ೧ ವ. ೩೧೪) ಎಂದು ಮೆರೆಮಿಂಡಯ್ಯ ತೀವ್ರವಾಗಿ ಆಕ್ಷೇಪಿಸುವನು. ಅಪ್ಪಿದೇವಯ್ಯನು 'ಹೊನ್ನು ಹೆಣ್ಣು ಮಣ್ಣು ಬಿಡಿಸದ ಗುರುವಿನ ಉಪದೇಶವನೊಲ್ಲೆ' ಎಂದು ನಿರಾಕರಿಸುವನು. ಹಣದಾಸೆಗೆ ವಿಭೂತಿ ರುದ್ರಾಕ್ಷಿಯನ್ನು ಕೊಟ್ಟು ಭಕ್ತನನ್ನಾಗಿ ಮಾಡುವ ಗುರುಗಳೂ ಇದ್ದಿರಬೇಕು.* ಅಂತಹ ವಿಲಕ್ಷಣ ಪದ್ಧತಿಯನ್ನು ಅರಿವಿನ ಮಾರಿತಂದೆ

---

*ಇದು ಭಕ್ತರ ವಿಚಿತ್ರ ನಡವಳಿಕೆಯಾದರೆ 'ವಿಭೂತಿಯ ಪಟ್ಟ' ಸಂಪ್ರದಾಯ (= ಲಿಂಗವನ್ನು ಅನುಗ್ರಹಿಸದೆ ಬರಿಯ ವಿಭೂತಿ ರುದ್ರಾಕ್ಷಿಗಳನ್ನು ಅನುಗ್ರಹಿಸಿ ಶಿಷ್ಯರುಗಳನ್ನಾಗಿ ಮಾಡುವುದು) ಮೈಸೂರು ಜಿಲ್ಲೆಯಲ್ಲಿ ಇಂದಿಗೂ ಕೆಳವರ್ಗ ದವರಲ್ಲಿದೆ. ಇವರನ್ನು ದೇವರ ಗುಡ್ಡರೆಂದು ಕರೆಯಲಾಗುವುದು. ಗುರುಗಳದು ಮತ್ತೂ ವಿಚಿತ್ರತರದ್ದು. ಇಷ್ಟಲಿಂಗವನ್ನು ಕೊಟ್ಟ ಗುರು ಶಿಷ್ಯನ ಮನೆಯಲ್ಲಿ ಅನ್ನ ಪಾನಾದಿಗಳನ್ನು ಸ್ವೀಕರಿಸದೆ ಅವನಿಂದ ಅಕ್ಕಿ ತುಪ್ಪವನ್ನು ಪಡೆದು ಪ್ರತ್ಯೇಕವಾಗಿ ಅಡುಗೆ ಮಾಡಿಕೊಂಡು ಉಣ್ಣುತ್ತಿದ್ದ ದೃಷ್ಟಾಂತಗಳು ಸಾಕಷ್ಟು ಅಂದಿನ ಸಮಾಜದಲ್ಲಿ ದೊರೆಯುತ್ತಿದ್ದಿತು. ಮೆರೆಮಿಂಡಯ್ಯ, ಅಂಬಿಗರ ಚೌಡಯ್ಯ ಹಾಗೂ ಹಾವಿನಹಾಳ ಕಲ್ಲಯ್ಯ (ಏಕೋತ್ತರ ಶತಸ್ಥಲ, ಪು. ೪೩೭-೮) ಇಂತಹ ಗುರುಗಳ ವರ್ತನೆಯನ್ನು ತಮ್ಮ ವಚನಗಳಲ್ಲಿ ಖಂಡಿಸಿರುವರು. ಮೆರೆಮಿಂಡಯ್ಯ ಇವರನ್ನು ವಿಟ್ಟಿಯ ಭಂಡರೆಂದು ಕರೆದು, 'ಇವರ ಕೈಯಲ್ಲಿ ಕಟ್ಟಿಸಿಕೊಂಡ ಲಿಂಗ ದೃಷ್ಟದಿ ಶ್ರವಕಾಯ. ಇದನರಿತು ಅಲ್ಲಿ ಹೊಕ್ಕು ಉಂಡವಂಗೆ ಕರಟನ ಕೈಯ ಕೀಟಕ. ಆ ಕಾಕೂಳು ಘಟಿತವುಯ. ಐಘಟದೂರ ರಾಮೇಶ್ವರಲಿಂಗವು ಅವರ ಒಲ್ಲ' ಎಂದಿರುವನು (ಸಪುವ. ೧ ವ. ೩೩೬). ಅಂಬಿಗರ ಚೌಡಯ್ಯನ ಪ್ರತಿಕ್ರಿಯೆ ಅತ್ಯಂತ ತೀಕ್ಷ್ಣವಾದುದು. ಇಂತಹ ಗುರುವನ್ನು ಕಂಡರೆ 'ಕೆಡವಿಹಾಕಿ ಮೂಗನೆ ಕೊಯ್ದು ಇಟ್ಟಂಗಿಯ ಕಲ್ಲಲೆ ತಿಕ್ಕಿ ಸಾಸಿವೆಯ ಹಿಟ್ಟನೆ ತಳಿದು ಮೇಲೆ ಲಿಂಬೆಯ ಹುಳಿಯನೆ ಹಿಂಡಿ ಪಡುವಣ ಗಾಳಿಗೆ ಅವನನ್ನು ಹಿಡಿ' ಎನ್ನುವನು (ವ. ೨೨೨).

ಖಂಡಿಸುತ್ತಾ 'ಲಿಂಗ ಹೊಱತೆಯಾಗಿ ವಿಭೂತಿ ರುದ್ರಾಕ್ಷಿಯ ಕೊಟ್ಟು ಗುರುವಾಗ ಬಹುದೆ ಅಯ್ಯ ? ಬೀಜವಿಲ್ಲದೆ ಅಂಕುರವಾಗಬಲ್ಲುದೆ ? ಗಂಡನಿಲ್ಲದ ಮುಂಡೆಗೆ ಗರ್ಭ ನಿಂದಡೆ ಅವಳಾರಿಗೆ ಯೋಗ್ಯ ? ಆ ಉಭಯವು ಕೇಡಾಯಿತ್ತು' ಎನ್ನುವನು. ಅವನೇ ಮತ್ತೊಂದು ವಚನದಲ್ಲಿ 'ಅಂಗದ ಮೇಲೆ ಲಿಂಗವಿಲ್ಲದೆ ವಿಭೂತಿ ರುದ್ರಾಕ್ಷಿಯ ಧರಿಸಲಾಗದು. ಅದೆಂತೆಂದಡೆ : ಸತಿ ಪುರುಷರಿಗೆ ಸಂಯೋಗವಲ್ಲದೆ, ಸತಿ ಸತಿಗೆ, ಪುರುಷ ಪುರುಷಗೆ ಸಂಯೋಗವುಂಟೆ ? ಅಂಗಹೀನಂಗೆ ಹಿಂಗದ ನವರಸವುಂಟೆ ? ಇಂತೀ ಲಿಂಗಬಾಹ್ಯಂಗೆ ವಿಭೂತಿಯ ಪಟ್ಟವೆಂದು ಕಟ್ಟಿದ ಗುರು ಕುಂಭೀಘೋರಕ್ಕೆ ಒಳಗು, ಸದಾಶಿವಮೂರ್ತಿ ಲಿಂಗಕ್ಕೆ ದೂರ' ಎಂದು ತಿರಸ್ಕರಿಸುವನು.

ಬಸವಾದಿ ಶಿವಶರಣರು ಜಾತಿಯ ನಿರ್ಮೂಲನಕ್ಕೆ ದೊಡ್ಡ ಆಂದೋಲನವನ್ನೇ ಮಾಡಿದರು. ಮಾನವರೆಲ್ಲ ಒಂದೆ ಜಾತಿ ಒಂದೆ ಕುಲ ಎಂದು ಹೇಳುವುದು ಸುಲಭ, ಅದು ಆಚರಣೆಯಲ್ಲಿ ಕಷ್ಟ. ಭಾರತೀಯ ಸಮಾಜದಲ್ಲಿ ಪರಂಪರೆಯಿಂದ ಆಳವಾಗಿ ಬೇರೂರಿ ಬಂದಿರುವ ಉತ್ತಮ, ಅಧಮ ಭೇದಭಾವವನ್ನು ಮಾತಿನಲ್ಲಿ ಹೇಳುವಷ್ಟು ಸುಲಭವಾಗಿ ಕದಲಿಸಲಾಗದು. ಬಸವಣ್ಣನಂತಹವರು ಜಾತಿ ಸೂತಕವನ್ನು ಮನಸ್ಸಿನಿಂದ ಸಂಪೂರ್ಣವಾಗಿ ಅಳಿಸಿಹಾಕಿದರು, ಎಲ್ಲರೂ ಅಲ್ಲ. ಬಸವಣ್ಣನ ಈ ಆದರ್ಶ ಹೊರನೋಟಕ್ಕೆ ಬಹಳ ಆಕರ್ಷಕವಾಗಿ ಕಾಣಿಸಿರಬೇಕು. ಉತ್ಸಾಹದಲ್ಲಿ ಬಹಳಷ್ಟು ಮಂದಿ ಇದನ್ನು ಸ್ವೀಕರಿಸಿದರು. ಆದರೆ ಮುಂದೆ ಅದು ಆಚರಣೆಗೆ ಬಹಳ ಕಷ್ಟವಾಗಿ ತೋರಿರಬೇಕು. ವ್ಯವಹಾರದಲ್ಲಿ ಯಾವುದೋ ಒಂದು ಘಟ್ಟದಲ್ಲಿ ಉತ್ತಮ ಅಧಮ ಎನ್ನುವ ಭೇದಭಾವ ಭಕ್ತರನ್ನು ಕಾಡಿರಬೇಕು. ಉಂಬಲ್ಲಿ ಉಡುವಲ್ಲಿ ಕ್ರೀಯಳಿಯಿತು ಎಂದವರು ಕೊಂಬಲ್ಲಿ ಕೊಡುವಲ್ಲಿ (= ವಿವಾಹಾದಿಗಳಲ್ಲಿ) ಕುಲವನ್ನು ನೋಡಿದರು. ಬಸವಣ್ಣ ಇಂತಹವರನ್ನು ನೋಡಿ 'ಎಂತಯ್ಯಾ ಅವರ ಭಕ್ತರೆಂಬೆ, ಎಂತಯ್ಯಾ ಅವರ ಮುಕ್ತರೆಂಬೆ ?....ಹೊಲತಿ ಶುದ್ಧನೀರ ಮಿಂದಂತಾಯಿತ್ತು' ಎಂದು ನೊಂದು ನುಡಿದಿರುವನು.

ಸಾಮಾಜಿಕವಾಗಿ ಒಳ್ಳೆಯ ಸ್ಥಾನವನ್ನೂ ಭಕ್ತರಿಂದ ಗೌರವಾದರಗಳನ್ನೂ ಪಡೆದಿದ್ದ ಜಂಗಮ, ವಿರಕ್ತರ ವರ್ತನೆಯ ಬಗೆಗೆ ಅಪ್ರಿಯವಾದ ಮಾತುಗಳನ್ನು ಕೆಳವರ್ಗದ ವಚನಕಾರರು ಆಡಿರುವರು. ಒಂದೆಡೆ ನಿಲ್ಲದೆ ಸದಾ ಸಂಚಾರಿಗಳಾಗಿ ಭಕ್ತರನ್ನು ಉದ್ಧರಿಸುವ ಸತ್ಪಥದಲ್ಲಿ ನಡೆಸುವ ಕಾರುಣ್ಯ ಮೂರ್ತಿಗಳಾಗಿರಬೇಕಾದ ಇವರು ಆಸೆ ಆಮಿಶಗಳಿಗೆ ಮೋಸ ವಂಚನೆಗಳಿಗೆ, ಹೆಣ್ಣು ಹೊನ್ನು ಮಣ್ಣುಗಳಿಗೆ ವಶರಾದ ದುರಂತ ಅಸಹನೀಯವಾದುದು. ಪೂಜ್ಯರೂ, ವಂದನೀಯರೂ ಆಗಿರಬೇಕಾದ ಇವರು ಚಾರಿತ್ರಹೀನರಾಗಿ ನಡಾವಳಿಯಲ್ಲಿ ಕನಿಷ್ಠರಾಗಿ ಇದ್ದುದು ವಚನಕಾರರ ಕೋಪಕ್ಕೆ ಕಾರಣವಾಗಿದೆ. ಮಡಿವಾಳ ಮಾಚಿದೇವ ದೇಶಾಂತರಿ ದೇಶಾಂತರಿಗ

 

ಳೆಂದು ಕರೆದುಕೊಳ್ಳುವ ಜಂಗಮರನ್ನು ಏಕಮೂರ್ತಿ ಸ್ತ್ರಿಯೋಭಾಗಂ ಗುರುರ್ಲಿಂಗಂತು ಜಂಗಮ ಎಂಬುದನಱಿಯದೆ ದೇಶಾಂತರಿ ಎಂದರೆ ಆರು ಮೆಚ್ಚುವರಯ್ಯಾ ? ಸುಮ್ಮನಿರಿ ಭೋ ಬರುಕಾಯರುಗಳಿರಾ' (ವ. ೪೧) ಎಂದು ಗದರಿಸುವನು. ಅವನ ಪ್ರಕಾರ 'ದೇಶಾಂತರಿಯಾದರೆ ಮೂಱು ಲೋಕದ ಕರ್ತನಂತೆ ಶಾಂತನಾಗಿರ ಬೇಕು. ಜಲದಂತೆ ಶೈತ್ಯವ ತಾಳಿರಬೇಕು. ಸೂರ್ಯನಂತೆ ಸರ್ವರಲ್ಲಿ ಪ್ರಭೆ ಸೂಸುತ್ತಿರಬೇಕು. ಪೃಥ್ವಿಯಂತೆ ಸರ್ವವ ಭಾರವ ತಾಳಿರಬೇಕು' ಇಂತಹವರನ್ನು ಅವನು ಮಹಂತಿನ ಕೂಡಲ ದೇವರೆನ್ನುವನಂತೆ. ಹೀಗಲ್ಲದೆ, 'ತ್ರಿವಿಧ ಮಲಗಳ ಭುಂಜಿಸುತ್ತ ಗುರು–ಲಿಂಗ–ಜಂಗಮಕ್ಕೆ ತನು–ಮನ–ಸವೆಯದೆ ತಾವೇ ದೇವರೆಂದು ತಮ್ಮುದರವ ಹೊರೆವ ಶ್ವಾನ ಸೂಕರನಂತೆ ಪ್ರಚಂಡ ಗರ್ವಿಗಳ ದೇಶಾಂತರಿ ಮಹಂತ ಎನಲಾಗದು' ಎನ್ನುವನು (ವ. ೪೧).

ಅವನೇ ಮತ್ತೊಂದು ವಚನದಲ್ಲಿ 'ಮೂಱು ಸ್ಥಲದ ಮೂಲವನಱಿಯರು : ಪುಣ್ಯ – ಪಾಪವೆಂಬ ವಿವರವನಱಿಯರು : ಇಹ – ಪರವೆಂಬುದನಱಿಯರು ; ಇವರನೆಂತು ಮಹಂತಿನ ದೇವರೆಂಬೆನಯ್ಯಾ ? ಹೊನ್ನು ವಸ್ತ್ರದವನ ಬಾಗಿಲ ಕಾಯ್ವ ಪಶುಪ್ರಾಣಿಗಳ ದೇವರೆನ್ನಬಹುದೇನಯ್ಯಾ ? ಜಗದ ಕರ್ತನ ವೇಷವ ಧರಿಸಿಕೊಂಡು ಸರ್ವರಿಗೆ ಬೇಡಿ, ಕೊಟ್ಟರೆ ಒಳ್ಳೆಯವ, ಕೊಡದಿರ್ದಡೆ ಕೆಟ್ಟವನು. ಪಾಪಿ ಚಂಡಾಲ ಅನಾಚಾರಿ ಎಂದು ದೂಷಿಸಿ ಒಳ ಹೊಱಗೊಂದು ಬೊಗಳುವ ಮೂಳ ಮಾನವರಿಗೆ ಮಹಂತಿನ ಆಚರಣೆ ಎಲ್ಲಿಯದೋ ?' (ವ. ೪೨) ಎಂದು ತಾತ್ಸಾರದಿಂದ ನುಡಿಯುವನು. ಹೊನ್ನು ಹೆಣ್ಣು ಮಣ್ಣನ್ನಾವರಿಸಿಕೊಂಡು, ಒಡವೆ ಆಭರಣಂಗಳ ಹಲ್ಲಣಿಸಿಕೊಂಡು ಬಂದು ಸರ್ವರಿಗೆ ಶಾಸ್ತ್ರೋಪದೇಶವ ಹೇಳುವವರು ಸೂಳೆಯರಂತೆ ತಮ್ಮ ಉಪಾಧಿಕೆಗೆ ಒಡಲಾಸೆಗೆ ಹಿತವಚನವ ನುಡಿವರು ಇಂತಹ ಪ್ರಪಂಚಿನ ವೇಷಡಂಭಕ ಧೂರ್ತಲಾಂಛನಧಾರಿಗಳಿಗೆ ಮಹಂತಿನ ದೇವರೆನ್ನಬಹುದೆ ? ಎನಲಾಗದು ಎಂದು ಬೇರೊಂದು ವಚನದಲ್ಲಿ (ವ. ೯೮) ಅವನು ಹೇಳುವನು. ಮಾಂಸವನ್ನು ತಿಂದು ಹೆಂಡವನ್ನು ಕುಡಿದು ರಂಡೆಯ ಸಂಪರ್ಕಮಾಡಿ ದಂಡವ ಕೊಡುವ 'ಜಗಭಂಡ ತಾಯಿಗ್ಗಂಡ ಹೆಂಡ ಗಾಱಿರಿಗೆ' ಸದ್ಭಕ್ತ ಸಿದ್ಧವೀರಮಾಹೇಶ್ವರರೆಂದು ಮನದಲ್ಲಿ ಭಾವಿಸಿದ್ದೇ ಆದರೆ ಹುಳುಗೊಂಡದಲ್ಲಿ ಬೀಳಬೇಕಾಗುತ್ತದೆ ಎಂದು ಅವರ ಹೇಯ ವರ್ತನೆಯನ್ನು ಹೇಸಿಕೆಯಿಂದ ಇನ್ನೊಂದು ವಚನದಲ್ಲಿ ಅವನು ಜರಿದಿರುವನು.

ಕೀಲಾರದ ಭೀಮಣ್ಣನು ತನ್ನ ವಚನವೊಂದರಲ್ಲಿ 'ವ್ಯಾಧನಂತೆ ಜಾತಿಗಾಱನಂತೆ ಹೇಮಚೋಱನಂತೆ ಇಂತೀ ಗಾಹುಗಳ್ಳರಂತೆ ಮಾತಿನಲ್ಲಿ ಬ್ರಹ್ಮವ ನುಡಿದು ಸರ್ವ ಸಂಸಾರದಲ್ಲಿ ಏಳುತ್ತ ಮುಳುಗುತ್ತ ಬೇವುತ್ತ ನೋವುತ್ತ ಮತ್ತೆ ಬ್ರಹ್ಮದ ಸುಮ್ಮಾನದ

ಸುಖಿಗಳೆಂತಪ್ಪರೋ ?' (ಸಪುವ. ೧ ವ. ೩೨೭) ಎಂದು ಇವರ ಬಗೆಗೆ ತನ್ನ ಸಂದೇಹ ವ್ಯಕ್ತಪಡಿಸಿರುವನು. ಮೆರೆಮಿಂಡಯ್ಯನು ತಮ್ಮ ನುಡಾವಳಿಯಿಂದ ಅವ ಹೇಳನಕ್ಕೆ ಪಾತ್ರರಾಗಿದ್ದ ಜಂಗಮರನ್ನು ಕುರಿತು 'ರಾಜರ ಮನೆಯ ಬಾಗಿಲಲ್ಲಿ ನಿಂದು ಕೂಗಿ ಮೊರೆಯಿಟ್ಟು, ನೀನಾರೊ ಎಂದು ಕೇಳಿದಡೆ ನಾನೊಡೆಯರು ಎಂದಡೆ ಅಡಗದೆ ನಿನ್ನ ಬಾಯಿ ? ತಡೆಯಿಸಿಕೊಂಡು ಒಡೆತನವುಂಟೆ ನಿನಗಲ್ಲಿ ? ಇಂತೀ ಬಿಡುಹೋರಿಗಳ ಬಾಡ ಅಡಗದೇಕೆ ?' (ಸಪುವ. ೧ ವ. ೩೨೭) ಎಂದು ಜರಿದಿರುವನು. ಬ್ರಹ್ಮದ ಮಾತನಾಡಿ ಕನ್ನೆಯರ ಕಾಲದೆಸೆಯಲ್ಲಿ ಕುಳಿತವರನ್ನೂ, ಒಮ್ಮಾನ ಅಂಬಲಿಯನಿಕ್ಕೆಂದು ಹಲಬುವವರನ್ನೂ ವೇಷಧಾರಿಗಳೆಂದು ಚೌಡಯ್ಯ ಕರೆಯುವನು (ವ. ೧೮೩).

ನಾವು ಪರಮ ವಿರಕ್ತರು, ಪಟ್ಟದ ಅಯ್ಯನವರು ಚರಮೂರ್ತಿಗಳು, ಪರದೇಶಿಗಳು ಎಂದು, ಶಂಖ ಗಿಳಿಲು ದಂಡಾಗ್ರ ಎಂಬ ಬಿರುದ ಹಿಡಿದು, ಕಾವಿಕಾಷಾಯಾಂಬರವ ಹೊದ್ದು, ಸರ್ವಕಾರ್ಯದಲ್ಲಿ ಶ್ರೇಷ್ಠರೆಂದು ಗರ್ವದಲ್ಲಿ ಕೊಬ್ಬಿ, ಕಾಮನಾಟದಲ್ಲಿ ಕಲಕಿ, ಮನಸ್ಸಿನಲ್ಲಿ ದುರ್ಗುಣವನ್ನಿಟ್ಟುಕೊಂಡು, ಮಾತಿನಲ್ಲಿ ನೀತಿಯ ಸೇರಿಸುತ್ತ, ಕಪಟದಲ್ಲಿ ಊರಿಂದೂರಿಗೆ ಸಾಗುವ ಜಂಗಮರನ್ನು ಚೌಡಯ್ಯ ತೊನ್ನ ಹೊಲೆಮಾದಿಗರೆಂದು ಕರೆದು ಅವರ ಸಂಗವನ್ನು ಮಾಡಲಾಗದು, ಅವರ ಪ್ರಸಂಗವ ಕೇಳಲಾಗದು ಎಂದು ತೀರಾ ಕಟುವಾಗಿ ನುಡಿದಿರುವನು (ವ. ೨೧೨). ಅಷ್ಟೇ ಅಲ್ಲ, ಇವರುಗಳು 'ಉಚ್ಚಂಗಿ ದುರ್ಗಿಗೆ ಬಿಟ್ಟ ಪೋತರಾಜನಂತೆ ಮೂಟು ಮೂಟು ಜಡೆಗಳ ಬಿಟ್ಟು, ಆಡಿನೊಳಗಿರುವ ಹಿರಿಯ ಹೋತಿನಂತೆ ಮೊಳ ಮೊಳ ಗಡ್ಡವ ಬಿಟ್ಟು, ಡೊಂಬ ಜಾತಿಗಾರನಂತೆ ವೇಷವ ತೊಟ್ಟು ಮೀಸೆಯ ಬೋಳಿಸಿಕೊಂಡು, ಕೈಪವ ಧರಿಸಿ, ಸಂಸ್ಕೃತ ಗೀರ್ವಾಣ ಭಾಷೆಯ ಕಲಿತು, ಕಾಕ ಕುಟಿಲ ಕುಹಕದ ಗಾಳಿಪೂಜೆಯಿಂದ ಬಂದ ಸುಡುಗಾಡು ಸಿದ್ಧಯ್ಯಗಳಂತೆ, ಗಿಡಮೂಲಿಕೆಗಳು, ತಂತ್ರಮಂತ್ರ, ಯಂತ್ರದ ಭಾಷೆಗಳ ಕಲಿತುಕೊಂಡು, ಪುರಜನರ ಮೆಚ್ಚಿಸಬೇಕೆಂದು ನಾವು ಕೆರೆ, ಬಾವಿ ತೋಡಿಸುತ್ತೇವೆ, ಮಠ, ಗುಡಿ ಕಟ್ಟಿಸುತ್ತೇವೆ, ಮಾನ್ಯದಲ್ಲಿ ಬಿಲ್ವಗಿಡಗಳನ್ನು ಬೆಳಸುತ್ತೇವೆ. ಮದುವೆ ಅಯ್ಯಾಚಾರವ ಮಾಡಿಸುತ್ತೇವೆ, ಅನ್ನದಾನ ಮಾಡುತ್ತೇವೆ, ಅರವಟ್ಟಿಗೆ ಇಡುತ್ತೇವೆ, ಪುರಾಣ ಪ್ರವಚನ ಮಾಡಿಸುತ್ತೇವೆ–ಎಂದು ಹೇಳಿಕೊಂಡು ನಾನಾ ದೇಶವ ಸುತ್ತಿ ಹೇಸಿ ಹೊಲೆ ಮಾದಿಗರ ಕಾಡಿ ಬೇಡಿ, ಸುಳ್ಳು ಹೇಳಿ, ಸೆಟ್ಟಿ ಮಾತಿನಿಂದ ಒಲಿಸಿ, ಕೊಟ್ಟರೆ ಹೊಗಳಿ ಕೊಡದಿದ್ದರೆ ಬೊಗಳಿ ಅವರು ಕೊಟ್ಟ ದ್ರವ್ಯವನ್ನು ತಂದು ಮಠದಲ್ಲಿ ಬಚ್ಚಿಟ್ಟು ಅದನ್ನು ಕಳ್ಳರು ಕದ್ದೊಯ್ದರೆಂದು ಹೇಳಿ ವಂಚಿಸಿ ಪರಸ್ತ್ರೀಯರನ್ನು ಕಾಮಿಸಿ, ಕಾಮಕ್ರೋಧದಲ್ಲಿ ಮುಳುಗಿ ಮತಿಗೆಟ್ಟು ಶಿವಪಥಕ್ಕೆ ದೂರಾಗಿ, ದುರಾಚಾರವ ಆಚರಿಸಿ, ನಡೆನುಡಿಗಳ ಹೊರ್ತಾಗಿ, ವ್ಯರ್ಥ ಹೊತ್ತು ಗಳೆದು ಸತ್ತುಹೋಗುತ್ತಿರುವರೆಂದು ಹೇಳಿ, ಇಂತಹ ಕಡುಪಾತಕ ಕತ್ತೆಹಡಿಕರನ್ನು ಪರಮ ನಿರಂಜನ ಜಂಗಮಲಿಂಗವೆಂದು ಮನೆಗೆ ಕರೆದು ತಂದು ಇವರ ಪಾದಪೂಜೆ

ಮಾಡಿ ಪಾದೋದಕ ಪ್ರಸಾದ ಸ್ವೀಕರಿಸುವವರಿಗೆ ಇಪ್ಪತ್ತೊಂದು ಯುಗ ಪರಿಯಂತರ ನರಕ ಎಂದು ಬೆದರಿಸುವನು. ಇಂತಹ ಜಂಗಮನು ಹಾಗೂ ಪೂಜೆ ಮಾಡುವ ಶಿವ ಭಕ್ತ ಇವರಿಬ್ಬರ ಮೂಗನ್ನು ಸೀಳಿ ಮೆಣಸಿನ ಹಿಟ್ಟು ತುಪ್ಪವ ತುಂಬಿ ಪಡಿಹಾರಿ ಉತ್ತಣ್ಣಗಳ ಎಡದ ಪಾದುಕೆಯಿಂದ ಘಡಘಡನೆ ಹೊಡೆಯಿರಿ ಎಂದು ಚೌಡಯ್ಯ ಆರ್ಭಟಿಸಿರುವನು (ವ. ೨೭೨).

ದುಡ್ಡೇ ಪ್ರಾಣವಾದ ಮಠಪತಿಗಳು ಹಣವಂತ ದೊಡ್ಡ ಶೆಟ್ಟಿಗಳನ್ನು ಕಂಡಾಗ ಅವರನ್ನು ತಡೆದು ಶರಣಾರ್ಥಿ ಎಂದು ಹೇಳಿ ತಮ್ಮ ಮಠಕ್ಕೆ ಬನ್ನಿ ಹಿರಿಯರೇ ಎಂದು ಒತ್ತಾಯಿಸುವುದನ್ನೂ, ಬಡವರು ಮಠಕ್ಕೆ ಬಂದು ಶರಣಾರ್ಥಿ ಎಂದರೆ ಕೇಳದ ಹಾಗೆ ಅಡ್ಡ ಮೋರೆಯ ಹಾಕಿಕೊಂಡು ಸುಮ್ಮನೆ ಹೋಗುವುದನ್ನೂ ಚೌಡಯ್ಯ ಕಂಡು ಅವರ ವರ್ತನೆಯ ಬಗೆಗೆ ನಗೆಯಾಡಿರುವನು (ವ. ೧೯೨). ಸಮತೆ ಸಮಾಧಾನವನ್ನು ಬೋಧಿಸುವ ವಚನದ ಓಲೆ ಕಟ್ಟುಗಳನ್ನು ಎತ್ತಿನ ಮೇಲೆ ಊರಿಂದೂರಿಗೆ ಹೇರಿಕೊಂಡು ಹೋಗುವ ವಿರಕ್ತನೊಬ್ಬನ ಚಿತ್ರವನ್ನು ನಗೆಯ ಮಾರಿ ತಂದೆ ತನ್ನ ವಚನವೊಂದರಲ್ಲಿ ಕೊಟ್ಟಿರುವನು. (ಅಮುಗೆ ರಾಯಮ್ಮನೂ ಇದನ್ನು ತನ್ನ ವಚನವೊಂದರಲ್ಲಿ ಪ್ರಸ್ತಾಪಿಸಿರುವಳು.) ವಚನದಕಟ್ಟುಗಳನ್ನು ಊರಿಂದೂರಿಗೆ ಎತ್ತುಗಳಲ್ಲಿ ಹೇರಿಕೊಂಡು ಹೋಗಿ ವಚನಗಳಲ್ಲಿ ಹೇಳಲಾಗಿರುವ ತತ್ತ್ವಬೋಧೆಯನ್ನು ಭಕ್ತರಿಗೆ ತಿಳಿಯ ಹೇಳುವ ವೃತ್ತಿ ವಿರಕ್ತರದ್ದಾಗಿರಬಹುದು. ಮಾತು–ಕೃತಿ ಹೊಂದಿಕೆ ಯಿಲ್ಲದ ವಿರಕ್ತರನ್ನು ಕೆಳವರ್ಗದ ವಚನಕಾರರು ತಮ್ಮ ಮಾತಿನ ಮೊನೆಯಿಂದ ಸಾಕಷ್ಟು ಘಾಸಿಗೊಳಿಸಿರುವರು. 'ಸಮತೆಯ ಸಮಾಧಾನವ ಹೇಳುವ ಪುಸ್ತಕ ಎತ್ತಿನ ಮೇಲೆ, ಹೊಯಿವ ದೊಣ್ಣೆ ಕೈಯಲ್ಲಿ, ಲೇಸಾಯಿತು ಈತನಿರವು. ಮಾತಿನಲ್ಲಿ ಆಗಮ ಮನದಲ್ಲಿ ತೂತಿನ ಕುಡಿಕೆಯ ಆಸೆ, ಇದು ನೀತಿಯಲ್ಲ' (ಸಪುವ. ೨ ವ. ೧೨೨೧) ಎಂದು ನಗೆಯ ಮಾರಿತಂದೆ ಹೇಳಿದರೆ, ಅವಸರದ ರೇಕಣ್ಣನು 'ದಾಕ್ಷಿಣ್ಯ ಭಕ್ತಿ, ಕಲಿಕೆಯ ವಿರಕ್ತಿ, ಮಾತಿನ ಮಾಲೆಯ ಬೋಧೆ ತೂತುಜ್ಞಾನಿಗಳ ಸಂಸರ್ಗ, ಭೀತ ಕುಂಭದಲ್ಲಿ ಅಮೃತವ ಹೊಯಿದಿರಿಸಲಿಕ್ಕೆ ಅದು ಎಷ್ಟು ದಿವಸ ಇರ ಲಾಪುದು ? ಇಂತಿವ ಕಳೆದುಳಿದು ನಡೆ – ನುಡಿ ಸಿದ್ಧಾಂತವಾಗಿ ಕೂಡಬೇಕು' (ಸಪುವ. ೨ ವ. ೪೭) ಎಂದು ಎಚ್ಚರಿಕೆ ನೀಡುವನು.

ಮೆರೆಮಿಂಡಯ್ಯನು ಬೋಧೆಯನ್ನು ಹೇಳಿ ಹೊಟ್ಟೆಹೊರೆವವನಿಗೆ ಆಗು ಹೋಗೆಯ ಮಾತೇಕೆ ? ಎಂದು ಕೇಳಿ, ವಿರಕ್ತನ ಬೋಧೆ ಅಂತರಂಗದಿಂದ ಬಂದಿದ್ದಲ್ಲಿ ಅದು ವಂದಿಮಾಗಧನ ಕಲಿತ ಮಾತಿನಂತೆ, ಕೊಲ್ಲಾಟಿಕನ ಆಟದಂತೆ ! ಛಿ : ಅದೇ ತರ ಅರಿವು–ಎಂದು ತುಚ್ಛೀಕರಿಸಿರುವನು (ಸಪುವ. ೧ ವ. ೩೦೦). 'ಮಾತ ಕಲಿತು ವೇಷವ ತೋರಿ ಘಾತಕತನದಲ್ಲಿ ಉಂಬ ಪಾಶಧಾರಿಗಳಿಗೇಕೆ ನಿರ್ಜಾತನ ಮಾತು ?

ಅದು ನೀತಿಯಲ್ಲ' (ಸಪುವ. ೧ ವ. ೩೩೩) ಎಂದು ಹೇಳುವನು. ಅವನೇ ಮತ್ತೊಂದು ವಚನದಲ್ಲಿ 'ಇರುಳಿಗೆ ಮೊಲೆ ಯೋನಿ ಅಧರ ; ಹಗಲಿಗೆ ಸಂಪುಟ ಲೇಖ, ಮಾತಿನ ಮಾಲೆಯು ಸರಕು ವೇಷದ ಪುಣ್ಯ ; ಸುಡು ! ಭ್ರಾಂತರ ಮಾತು ಸಾಕು ನಿಲ್ಲು' (ಸಪುವ. ೧ ವ. ೩೩೪) ಎಂದು ಹೀನೈಸಿರುವನು. ತನ್ನ ತಾನರಿಯದೆ ಇಷ್ಟಲಿಂಗದ ಹೊಲಬು ತಿಳಿಯದೆ, ಕಾಮವ ತೊರೆಯದೆ, ಹೇಮವ ಜರಿಯದೆ ನಾವು ಹರಗುರು ಚರ ಷಟ್‌ಸ್ಥಲದ ವಿರಕ್ತರೆಂದು ಕರೆದುಕೊಂಡು, ಕಾವಿ ಕಾಷಾಯ ವಸ್ತ್ರ ಧರಿಸಿ, ಶಂಖ ಗಿಳಿಲು ದಂಡಗಳನ್ನು ಹಿಡಿದು ಕೂಳಿಗಾಗಿ ನಾನಾ ದೇಶವ ಸುತ್ತಿ ಕಾಂಚನಕ್ಕೆ ಕೈಯೊಡ್ಡುವ ವಿರಕ್ತರ ಚಿತ್ರವನ್ನು ಮಡಿವಾಳ ಮಾಚಿದೇವ ತನ್ನ ವಚನ ವೊಂದರಲ್ಲಿ (ವ. ೨೦) ಕೊಟ್ಟಿರುವನು. ಮನೆಮನೆಯ ಬಾಗಿಲಿಗೆ ಹೋಗಿ ನಿತ್ಯವೂ ಬೇಡುವವ್ರತ, ನೇಮಗಳನ್ನು ಹೊಂದಿದ್ದ ಭಕ್ತರೂ ಅಂದು ಇದ್ದರು. ಮನಸಂದ ಮಾರಿ ತಂದೆ ಇಂತಹವರನ್ನು ನೋಡಿ 'ಭಕ್ತರು ನಾವೆಂದು ನಿತ್ಯನೇಮವ ಮಾಡಿಕೊಂಡೆನೆಂದು ಮನೆಮನೆಯ ಬಾಗಿಲ ತಪ್ಪಲ ಕಾಯಲೇತಕ್ಕೆ ? ಇದು ಶಿವಭಕ್ತರಿಗೆ ಒಪ್ಪುವುದೆ ?' (ಸಪುವ. ೧ ವ. ೧೩೫೩) ಎಂದು ಕೇಳಿರುವನು. ಖ್ಯಾತಿ ಲಾಭಕ್ಕಾಗಿ ಭಕ್ತಿಯನ್ನು ಮಾಡುವ ಭಕ್ತರು ಅಂದೂ ಇದ್ದರು. ಅಂತಹವರನ್ನು ಕಂಡು ಮನಸಂದ ಮಾರಿತಂದೆ 'ಖ್ಯಾತಿ ಲಾಭಕ್ಕೆ ಮಾಡುವಾತ ಭಕ್ತನಲ್ಲ' ಎಂದಿರುವನು (ಸಪುವ. ೧ ವ. ೧೪೯೬).

ಲೆತ್ತ, ಪಗಡಿ, ಚದುರಂಗ, ಜೂಜು, ಕಳವು, ಕರ್ಕಶಪಗಡಿ, ಪರಿಹಾಸಕ, ಸರಸ, ವಿನೋದ, ಕುಚಿತ್ತ, ಕುಟಿಲ, ಕುಹಕ, ಆಟಮಾಟ, ಸಟೆ, ಸಂಕಲ್ಪ ಉದಾ ಸೀನ, ನಿರ್ದಯ, ನಿರ್ದಾಕ್ಷಿಣ್ಯ, ದಾಸಿವೇಶಿ ಪರಸ್ತ್ರೀ ಪರಧನ ಫಲಾಪೇಕ್ಷೆ, ಪರ ದೈವ, ಭವಿಸಂಗ–ಇವನ್ನು ಹೊಂದಿದ್ದ ಭಕ್ತಜಂಗಮರನ್ನು ಮಡಿವಾಳ ಮಾಚಿದೇವ ನೋಡಿ, ಇವರು ನಾಯಿಯ ಮಾಂಸ ನರಮಾಂಸ ತಿನ್ನುವ ಕ್ರಿಮಿಕೀಟಗಳು, ಸುರೆಯ ದಾಸರು, ಇವರು ಭಕ್ತರಲ್ಲ ಜಂಗಮವಲ್ಲ ಎಂದು ಹೇಳಿ, ಇವರಿಬ್ಬರ ಮೇಳಾ ಪದ ರೀತಿ ಎಂತಹದ್ದೆಂದರೆ, 'ಈಹಂದಿಯ ಹೇಲ ತಿಂದು ಒಂದರ ಮೊಲೆಯ ನೊಂದು ಮೂಸಿದಂತೆ' ಎಂದು ಅಣಕವಾಡುವನು (ವ. ೯೯). ಗುರುಲಿಂಗ ಜಂಗಮ ಕ್ಕೆಂದು ಹಣವನ್ನು ಕಲೆಹಾಕಿ ಅದನ್ನು ಬಚ್ಚಿಟ್ಟು, ನೆಲವನ್ನು ತೋಡಿ ಅಡಗಿಸಿಟ್ಟು ಅದರಿಂದ ಅಷ್ಟವಿಧಾರ್ಚನೆಯ ಮಾಡುವ ಮೋಸಗಾರ ಭಕ್ತರನ್ನು ಕುರಿತು ಚೌಡಯ್ಯ ತನ್ನ ವಚನವೊಂದರಲ್ಲಿ (ವ. ೨೧೫) ಟೀಕಿಸುವನು. ಮನಮುಟ್ಟಿ ಪೂಜೆಯನ್ನು ಮಾಡದೆ, ಆಡಂಬರದ ಪೂಜೆಯನ್ನು ಮಾಡುವ ಭಕ್ತರನ್ನು ಮೆರೆಮಿಂಡಯ್ಯ ಗೇಲಿ ಮಾಡಿರುವನು. ಅಂತಹ ಭಕ್ತರ ಪೂಜೆ ವ್ಯರ್ಥವೆಂಬುದನ್ನು 'ಮಣ್ಣಿಗೋಡೆಯ ತೊಳೆದು ನಿರ್ಮಲವನರಸುವನಂತೆ' 'ಕುಕ್ಕುರ ಅಸ್ತಿಯ ಕಡಿದು ತನ್ನಯ ಶ್ರೋಣಿ ತಕ್ಕೆ ಚಪ್ಪರಿಸುವಂತೆ'–ಹೀಗೆ ಈ ಎರಡುಉಪಮೆಗಳ ಮೂಲಕ ಹೇಳುವನು (ಸಪುವ ೧ ವ. ೩೬೦).

ಇಷ್ಟಲಿಂಗವನ್ನಲ್ಲದೆ ಬೇರಾವ ದೈವವನ್ನೂ ಪೂಜಿಸದ ನೇಮ ಶಿವಶರಣರದು. ಹೊಸದಾಗಿ ಲಿಂಗ ಧರಿಸಿ ಉತ್ತಮರೆನ್ನಿಸಿಕೊಂಡ ಕೆಳವರ್ಗದವರು ಈ ನೇಮವನ್ನು ನಿಷ್ಠೆಯಿಂದ ಪಾಲಿಸ ಹೊರಟರು. ಅನ್ಯದೈವತಾರಾಧನೆ, ಕ್ಷುದ್ರದೇವತಾರಾಧನೆ ಪಾಪವೆಂದು ಬಗೆದ ಇವರು ಅವನ್ನು ಮಾಡಹೊರಟ ಲಿಂಗವಂತರನ್ನು ಉಗ್ರವಾಗಿ ಆಕ್ಷೇಪಿಸಿರುವರು. ಮಡಿವಾಳ ಮಾಚಿದೇವ ಶಿವಭಕ್ತನಾದವನು ಭವಿಸಂಗ ಮಾಡಿದರೆ ಪಾಪ ಎಂದು ಹೇಳಿ ಭವಿಸಂಗಕ್ಕಿಂತಲೂ ಸುರಾಪಾನಿಯ ಸಂಗ, ಸುರಾಪಾನಿಯ ಸಂಗಕ್ಕಿಂತಲೂ ಮಾಂಸಹಾರಿಯ ಸಂಗ, ಮಾಂಸಾಹಾರಿಯ ಸಂಗಕ್ಕಿಂತಲೂ ಭಂಗಿ ಭಕ್ಷಕರ ಸಂಗ, ಭಂಗಿ ಭಕ್ಷಕರ ಸಂಗಕ್ಕಿಂತಲೂ ಶಿವಭಕ್ತನಾಗಿದ್ದು ಅನ್ಯ ದೈವವ ಪೂಜಿಸುವವನ ಸಂಗ ಮಹಾ ಪಾಪವೆನ್ನುವನು (ವ. ೯೦). ಚೌಡಯ್ಯ 'ಲೋಕದ ಗಜಿಬಿಜಿ ದೈವಂಗಳಿಗೆಱಗುವ ಕುನ್ನಿಮಾನವರ ಕಂಡಡೆ ಯಮನು ಬಿಗಿದೆಳದೊಯ್ದು ಕೊಲ್ಲದಿಪ್ಪನೆ ?' ಎನ್ನುವನು.

ಗುರುವಿನಿಂದ ಉಪದೇಶವನ್ನು ಪಡೆದು ಅವನಿಂದ ಪ್ರಸಾದ ಸ್ವೀಕರಿಸಲು ಸೂತಕವ ಮಾಡುವವರನ್ನು ಮಡಿವಾಳ ಮಾಚಿದೇವ 'ಗಂಡನೆಂಜಲಿಗೆ ಹೇಸುವಳು, ಮಿಂಡನೆಂಜಲ ತಿಂಬವಳ ತೆಱನಂತೆ' ಎಂದು ಟೀಕಿಸುವನು (ವ. ೫೬). ಅಂತಹವರನ್ನು ಪಂಚಮಹಾಪಾತಕರೆಂದು ಕರೆದು, ಮೈಲಾರ, ಬೀರ, ಭೈರವ, ಏಕನಾಥಿ, ಕುಕ್ಕನೂರ, ಬಸದಿ, ಕೇಪ, ಧೂಳ ಇವರೇ ಮೊದಲಾದ ಕ್ಷುದ್ರದೈವಗಳಿಗೆ ನಮಿಸುವ ಅವರ ವರ್ತನೆಯನ್ನು ಕಂಡು ಹೇಸಿ ಅಂತಹವರನ್ನು ಚಂಡಿನಾಯಿಗಳೆಂದು ಸಂಬೋಧಿಸುವನು (ವ. ೫೬). ತದ್ದು, ತುರಿ, ತಲೆಬೇನೆ, ಶೀತ, ವಾಂತಿ, ಜ್ವರ, ಹೊಟ್ಟೆನೋವು, ಕೆಟ್ಟಹುಣ್ಣು ಇವೇ ಮೊದಲಾದ ಮೂನ್ನೂರರುವತ್ತು ರೋಗಗಳನ್ನು ಶಿವನು ಹರಿಯಬಿಟ್ಟು ನೋಡುವನು. ಇವೆಲ್ಲವೂ ಶಿವನ ಕರುಣವಾದಲ್ಲದೆ ಹೋಗವು ಎಂದು ಹೇಳುವ ಮಡಿವಾಳ ಮಾಚಿದೇವ, ಲೋಕದ ಬುದ್ಧಿಗೇಡಿ ಮನುಜರು ಅದ್ದನ ಜೋಳ, ಅರೆಮಾನ ಎಣ್ಣೆಯನ್ನು ನೋಟಕಾರತಿಯ ಮನೆಗೆ ತೆಗೆದುಕೊಂಡು ಹೋಗಿ ಅವಳು ಹೇಳಿದ್ದನ್ನು ಕೇಳಿ ಭೂತದ ಕೋಟಲೆಯೆಂದು ನಂಬಿ ಮನೆಗೆ ಬಂದು ಭೂತಗಳಿಗೆ ಬಲಿಯನ್ನು ಕೊಟ್ಟು ಬಲಿಯನ್ನವನ್ನು ತಮ್ಮ ಇಷ್ಟಲಿಂಗಕ್ಕೆ ತೋರುವವರನ್ನು ಲಿಂಗದ್ರೋಹಿ ಎಂದು ಕರೆಯುವನು (ವ. ೫೭). ನೂರೊಂದು ಕುಲ ಹದಿನೆಂಟು ಜಾತಿಗಿಕ್ಕಿದ ಅನಂತ ದೈವದ ಉಚ್ಚಿಷ್ಟೋದಕ, ಎಂಜಲನ್ನ ಇವುಗಳನ್ನು ತಂದು ಇಷ್ಟಲಿಂಗಕ್ಕೆ ನೈವೇದ್ಯ ಮಾಡಿ ಸ್ವೀಕರಿಸುವವರನ್ನು ಅಧಮ ಹೊಲೆಯರೆಂದೂ, ಅವರು ಶತಸಹಸ್ರವೇಳೆ ಶುನಿಸೂಕರಾದಿಗಳಲ್ಲಿ ಜನಿಸಿ ಅಂತ್ಯದಲ್ಲಿ ಕಾಲಕಾಮರ ಪ್ರಳಯಕ್ಕೊಳಗಾಗದೆ ಮಾಣ್ಬರೇ ಎಂದು ಕೇಳಿರುವನು (ವ. ೯೧). ಏಕನಾತಿಯ ಪೂಜಿಸುವವರು ಬತ್ತಲಿಗರಾದುದನ್ನೂ, ವಿಷ್ಣುವನ್ನು ಪೂಜಿಸುವವರು ಭುಜವ ಸುಡಿಸಿಕೊಂಡುದನ್ನೂ ತಾನು ಕಂಡುದಾಗಿ ಮಡಿವಾಳ ಮಾಚಿದೇವ

ಹೇಳುವನು (ವ. ೧೪೦). ಅವನೇ ಇನ್ನೊಂದೆಡೆ 'ಜಕ್ಕಿ, ಜನ್ನಿ, ದುಃಖಿನಾತಿ, ಮಾಯಿರಾಣಿ, ಕುಕ್ಕನೂರ ಸಿಂಗಿ, ಚವುಡಿ, ಮೈಲಾರ, ಜಿನ್ನನು, ಕುಂಟ ಭೈರವ ಮೊದಲಾದ ಭೂತ ಪೇತು ಪಿಶಾಚಿ ದೇವರೆಲ್ಲರು ಅಕ್ಕಸಾಲೆಯ ಕುಪ್ಪಟಿಗೆ ಒಂದರಾಗಿ ಇದೆ ಸುಡುಗಾಡು ಕಾಣಾ' ಎಂದಿರುವನು (ವ. ೧೪೪).

ಭಕ್ತನು ಗುರುವಿನಿಂದ ದೀಕ್ಷೆಯನ್ನು ಸ್ವೀಕರಿಸಿ ಪುನರ್ಜನ್ಮವನ್ನು ಪಡೆದ ಮೇಲೂ ಭವಿಗಳಾಗಿರುವ (= ಅಲಿಂಗಿಗಳಾದ) ತನ್ನ ಮಕ್ಕಳು ಮಾತಾಪಿತರು, ಬಂಧುಗಳು ಇವರ ಸಂಬಂಧವನ್ನು ಬಿಡಲಾರದೆ ಕೂಳಿನಾಸೆ ಮಾಡಿ ಇವರಲ್ಲಿಗೆ ಹೋಗಿ ಬರುತ್ತಿದ್ದನು. ಇಂತಹವರನ್ನು ನೋಡಿ ಮಡಿವಾಳ ಮಾಚಿದೇವ ನಕ್ಕು ಇವರ ಈ ಬಗೆಯ ನಡಾವಳಿ, 'ಕೋಳಿ ತಾನು ಬೆಕ್ಕು [ನಾಯಿದ್ದ ಗೃಹಕೆ] ಗುಟುಕ ಕೊಳ ಹೋದ ತೆಱನಾಯಿತ್ತು' ಎಂದು ವ್ಯಂಗ್ಯವಾಡುವನು (ವ. ೩೬). ಗುರುವಿನಿಂದ ಉಪದೇಶ ಪಡೆದ ಮೇಲೂ, ಅನೀತಿ ದೇವರುಗಳಿಗೆ ವಂದಿಸಿ ಅವುಗಳ 'ಎಡೆ' (= ಪ್ರಸಾದ) ಸ್ವೀಕರಿಸುವವರನ್ನು ಚೌಡಯ್ಯ ಮಾದಿಗರೆಂದು ಕರೆದು (ವ. ೧೯), 'ಮೈಲಾರ, ಬೀರ, ಭೈರವ, ಧೂಳ, ಕೇತನೆಂಬ ಕಿಱುದೈವಕ್ಕೆಱಗಿ ಭಕ್ತರೆನಿಸಿ ಕೊಂಬುವ ಚಂಡಿನಾಯಿಗಳ ಕಂಡು ಮನ ಹೇಸಿತ್ತು' ಎನ್ನುವನು (ವ. ೧೯). ಸೋಮವಾರ, ಹುಣ್ಣಿಮೆ, ಅಮಾವಾಸ್ಯೆ ಎಂದು ಉಪವಾಸವಿದ್ದು ಶಿವಾರ್ಪಿತ ಎನ್ನುವವರನ್ನೂ, ಗ್ರಾಮದ ಹೊರಭಾಗದಲ್ಲಿರುವ ದೇವತೆಗಳು ಹೆಚ್ಚೆಂದು ಅವನ್ನು ಪೂಜಿಸಿ ಅವಕ್ಕೆ ಅರ್ಪಿಸಿದ 'ಎಡೆ'ಯನ್ನು ಶಿವನಿಗೆ ಅರ್ಪಿತಮಾಡಿ ಸ್ವೀಕರಿಸುವ ವರನ್ನೂ ಚೌಡಯ್ಯ ಟೀಕಿಸುತ್ತಾ, ಅವರ ಈ ವರ್ತನೆ 'ದೊಡ್ಡ ಗ್ರಾಮದ ಸೂಕರನು ಗಂಗೆಯಲ್ಲಿ ಮಿಂದುಬಂದು ಅಮೇಧ್ಯವ ಬುಂಜಿಸಿದ ತೆಱನಾಯಿತು' ಎನ್ನುವನು (ವ. ೨೧).

ಭವಿತನಕ್ಕೆ ಹೇಸಿ ಭಕ್ತನಾದ ಮೇಲೂ ಕೊರಳಿಗೆ ಕವಡೆಯ ಕಟ್ಟಿ ನಾಯಾಗಿ ಬೊಗಳುವ, ಹುರಿಬೆನ್ನು ಹಿಡಿ ಬಾಯಬೀಗದಲ್ಲಿ ಹೋಗುವ, ಬೇವಿನ ಉಡುಗೆಯ ನ್ನುಟ್ಟು ಹಡಲಿಗೆಯನ್ನು ಹೊತ್ತು 'ಉಧೋ ಉಧೋ' ಎನ್ನುವ, ಭವಿಮಾರ್ಗದಲ್ಲಿ ನಡೆಯುವ ವ್ಯಕ್ತಿಗಳಿದ್ದರು. ಅಂತಹವರನ್ನು ಚೌಡಯ್ಯ ಶಿವದ್ರೋಹಿಗಳೆಂದು ಕರೆದಿರುವನು. ಅವರಿಗೆ ಲಿಂಗಧಾರಣೆ ಮಾಡುವನೊಬ್ಬ ಗುರುದ್ರೋಹಿ ; ಅವರಿಗೆ ಪಾದೋದಕ ಧರಿಸುವ, ವಿಭೂತಿ ರುದ್ರಾಕ್ಷಿಯ ಕೊಡುವನೊಬ್ಬ ಲಿಂಗದ್ರೋಹಿ ; ಅವರು ಭಕ್ತರೆಂದು ಅವರ ಮನೆಯ ಹೊಕ್ಕು ಮಂತ್ರವ ಹೇಳಿ ಆಹಾರ ಸ್ವೀಕರಿಸುವವ ನೊಬ್ಬ ಜಂಗಮದ್ರೋಹಿ. ಈ ನಾಲ್ವರಿಗೂ ಸೂರ್ಯಚಂದ್ರರಿರುವವರೆಗೆ ಎಕ್ಕಲ ಕುಂಡಲದಲ್ಲಿ ಹಾಕುವ ಶಿಕ್ಷೆಯನ್ನು ಚೌಡಯ್ಯ ವಿಧಿಸುವನು (ವ. ೧೯೧). ಉರಿ ಲಿಂಗ ಪೆದ್ದಿಯೂ ಭವಿಮಾರ್ಗದಲ್ಲಿ ನಡೆಯುವ ಭಕ್ತರನ್ನು ನೋಡಿ 'ಮೈಲಾರನ ದೇವರೆಂದಾರಾಧಿಸಿದಾತನು ಕೊರಳಲ್ಲಿ ಕವಡೆಯ ಕಟ್ಟಿ ಕುರುಳು ಬೆರಳ ಕಡಿದಿಕ್ಕಿ

ಬಾಹಿರನಾದನು. ಮಾಯಿರಾಣಿಯೇ ದೇವರೆಂದಾರಾಧಿಸಿದಾತನು ಕೊರಳಲ್ಲಿ ಕವಡೆಯು ಕಟ್ಟಿ ತಲೆಯಲ್ಲಿ ಕೆರಹ ಹೊತ್ತು, ಬೇವಿನ ಸೊಪ್ಪನ್ನುಟ್ಟು ಲಜ್ಜೆಯ ನೀಗಿದ. ಈ ಬಿನುಗು ದೈವಂಗಳ ಭಕ್ತಿ, ಬಣಗುನಾಯಿ ಒಣಗಿದೆಲುವ ಕಚ್ಚಿಕೊಂಡು ಕಂಡ ಕಂಡೆಡೆಗೆ ಹರಿದಂತಾಯಿತ್ತು' ಎಂದಿರುವನು. ಪಂಚಭೂತಗಳಿಗೆ[1] ಬಲಿಯನಿಕ್ಕಿ ಆ ಭೂತ ಶೇಷವ ತಿನ್ನುವವರನ್ನು, ಲಿಂಗ ಪ್ರಾಣಿಗೆ ಸಮನೆನ್ನುವವರ ಬಾಯಲ್ಲಿ ಕೆರ್ಪನಿಕ್ಕಿ ಎಂದು ಉರಿಲಿಂಗಿಪೆದ್ದಿ ಕಟುವಾಗಿ ನುಡಿದಿರುವನು (ವ. ೨೫೮). ಶಿವಕಾರುಣ್ಯಕ್ಕೆ ಸಹಕಾರಿಗಳಲ್ಲದ ಯಾರೇ ಆಗಿರಲಿ ಆ ನಿಂದಕರನ್ನು ಆದಷ್ಟು ಬೇಗ ಕೊಲ್ಲುವುದೆಂದು ಮಡಿವಾಳ ಮಾಚಿದೇವ ತನ್ನ ವೀರಾಚಾರವನ್ನು ವಚನವೊಂದರಲ್ಲಿ ಘೋಷಿಸಿರುವನು (ವ. ೬೨). ಅವನ ಪ್ರಕಾರ 'ಮಾತಾಪಿತೃಗಳಾಗಲಿ, ಸತಿಸುತರಾಗಲಿ, ಸಹೋದರ ಬಂಧುಗಳಾಗಲಿ, ಅತ್ಯಂತ ಸ್ನೇಹದಲ್ಲಿ ಕೂಡಿದವರಾಗಲಿ, ಗುರುಕಾರುಣ್ಯವ ಪಡೆದ ಶಿವಸೋದರರಾಗಲಿ ಶಿವಕಾರುಣ್ಯಕ್ಕೆ ಸಹಕಾರಿಗಳಲ್ಲದೆ ನಿಂದಕರಾದಲ್ಲಿ ಅವರನ್ನು ತೀವ್ರವಾಗಿ ಕೊಲ್ಲುವುದು ; ಸಹಕಾರಿಗಳಾಗಿ ಅನುಕೂಲವಾದರೆ ನಮ್ಮವರು, ಅನುಕೂಲವಲ್ಲದವರು ನಮ್ಮವರಲ್ಲ. ಶಿವಾಚಾರ ನಿಂದಕರನ್ನು ಎನ್ನ ಮನದಲ್ಲಿ ಪತಿಕರಿಸಿ ಕೂಡಿಕೊಂಡು ನಡೆದೆನಾದಡೆ ಇಹಪರಕ್ಕೆ ಸಲ್ಲೆನು ಅಘೋರ ನರಕದಲ್ಲಿಕ್ಕಯ್ಯಾ' ಎಂದು ಮಾಚಿದೇವ ತನ್ನ ಇಷ್ಟದೈವದ ಮುಂದೆ ಪ್ರತಿಜ್ಞೆ ಕೈಗೊಂಡಿರುವನು (ವ. ೬೨).

ಸ್ಥಾವರಲಿಂಗ ಪೂಜೆಯನ್ನು ಉಗ್ರವಾಗಿ ಖಂಡಿಸಿದವರಲ್ಲಿ ಚೌಡಯ್ಯ ಹಾಗೂ ಮಡಿವಾಳ ಮಾಚಿದೇವ ಮುಖ್ಯರು. ಕಟ್ಟಿದ ಲಿಂಗವನ್ನು ಕಡೆಗಣಿಸಿ ಬೆಟ್ಟದ ಲಿಂಗಕ್ಕೆ ಹೋಗಿ ಹೊಟ್ಟಡಿಯಾಗಿ ಬೀಳುವವರನ್ನು ಚೌಡಯ್ಯ ಮೆಟ್ಟಿರುವ ಪಾದರಕ್ಷೆಯಿಂದ ಲಟಲಟನೆ ಹೊಡೆಯಲು ಹೇಳುವನು (ವ. ೪೨). ಅಷ್ಟೇ ಅಲ್ಲ, ಬೆಟ್ಟದ ಲಿಂಗವ ಹಿರಿದು ಮಾಡಿ ಕಟ್ಟಿದ ಲಿಂಗವ ಕಿರಿದು ಮಾಡುವ ಧೂರ್ತರನ್ನು ಕುರಿತು 'ಬಿಟ್ಟುಕೊಡಿ ನಿಮ್ಮ ಇಷ್ಟಲಿಂಗವ ನಮ್ಮ ಕೈಗೆ, ಕೊಡದಿರ್ದಡೆ ನಟ್ಟನಡು ನೀರೊಳಗೊಯ್ದು ಕಟ್ಟಿಮುಳುಗಿಸಿ ನಿಮ್ಮನ್ನು ಲಿಂಗೈಕ್ಯರ ಮಾಡುವೆ' ಎಂದು ಪ್ರಾಣ ಭಯವನ್ನೂ ತೋರಿರುವನು (ವ. ೪೩). ಮಡಿವಾಳ ಮಾಚಿದೇವನು 'ಒಟ್ಟಿದ್ದ ಮಣ್ಣಿಗೂ ನೆಟ್ಟಿದ್ದ ಕಲ್ಲಿಗೂ ಕಟ್ಟಿದ್ದ ಲಿಂಗವಡಿಯಾಗಿ ಬೀಳುವ ಲೊಟ್ಟಿ ಗುಡಿಹಿಂಗಳನೇನೆಂಬೆನಯ್ಯಾ (ವ. ೬೮) ಎಂದು ಉಡಿಯ ಲಿಂಗವಬಿಟ್ಟು ಗುಡಿಯ

---

1. ಪಂಚಭೂತಗಳನ್ನು ಲಿಂಗವೆಂದು ಭಾವಿಸಿದ್ದ ಜನರೂ ಇದ್ದರು. ಹಾಗೆ ಭಾವಿಸಿದ್ದೇ ಆದರೆ ಅದರಿಂದ ಪಡೆವ ಪ್ರಾಪ್ತಿಯನ್ನು ಒಂದು ವಚನದಲ್ಲಿ ಮಡಿವಾಳ ಮಾಚಿದೇವ ಹೇಳಿರುವನು (ವ. ೧೪೩). ಅವನೇ ಇನ್ನೊಂದು ಕಡೆ ಜಲ, ನೆಲ, ಅಗ್ನಿ, ವಾಯು, ಆಕಾಶ, ಚಂದ್ರ, ಸೂರ್ಯ, ಆತ್ಮ ಇವರಾರೂ ದೈವವಲ್ಲ ಬಸವನೊಬ್ಬನೆ ದೈವವೆಂದಿರುವನು (ವ. ೧೫೫).

ಲಿಂಗಕ್ಕೆ ಶರಣೆನ್ನುವವರನ್ನು ಆಕ್ಷೇಪಿಸಿರುವನು (ವ. ೭೯). ಕಲಿದೇವನಿಗೆ ಹುಲು ದೈವವ ಸರಿಯೆಂದು ನುಡಿವನ ಬಾಯ ಎಡದಕಾಲ ಕೆರಹಿಂದ ಬಡಿಯೆಂದು ಅವನು ಆರ್ಭಟಿಸಿರುವನು (ವ. ೮೭). ಶುದ್ಧ ಶೈವದ ಹಾಗೆ ನಂದಿ, ವೀರಭದ್ರ, ದುರ್ಗೆ, ಹಾವುಗೆ, ಕಂಥೆ, ಕಮಂಡಲ ಮತ್ತೆ ಲಿಂಗಗಳೆಂದು ಇದಿರಿಟ್ಟು ಪೂಜಿಸುವವನ ಮನೆಯ ಪಾಕ ಅಮೇಧ್ಯ, ಮಾಂಸ ಎಂದೂ ಅವನು ಹೇಳಿರುವನು (ವ. ೭೪). ಕಲ್ಲು, ಮರ, ಮಣ್ಣಿನ ಮರೆಯಲ್ಲಿ ಪೂಜಿಸಿಕೊಂಬುದು ಪರಮಾತ್ಮನೆ ? ಎಂದು ಅರಿವಿನ ಮಾರಿತಂದೆ ಕೇಳಿರುವನು (ಸಪ್ರುವ ೧ ವ. ೪೦೪). ವೀರಗೊಲ್ಲಾಳನು 'ಕಲ್ಲುಲಿಂಗವಲ್ಲ, ಉಳಿಯ ಮೊನೆಯಲ್ಲಿ ಒಡೆಯಿತ್ತು ; ಮರ ದೇವರಲ್ಲ, ಉರಿಯಲ್ಲಿ ಬೆಂದಿತ್ತು ; ಮಣ್ಣು ದೇವರಲ್ಲ, ನೀರಿನ ಕೊನೆಯಲ್ಲಿ ಕದಡಿತ್ತು ; ಇಂತಿವನೆಲ್ಲ–ವನಱಿವ ಚಿತ್ತ ದೇವರಲ್ಲ, ಕರಣಂಗಳ ಮೊತ್ತದೊಳಗಾಗಿ ಸತ್ತುಗೆಟ್ಟಿತ್ತು, ಎಂದಿರುವನು (ಸಪ್ರುವ ೩ ಪು. ೨೬೮). ಅವನ ಪ್ರಕಾರ, ಪರವಸ್ತು ಇರುವ ಎಡೆಯಾವುದೆಂದರೆ 'ಕಂಡವರೊಳಗೆ ಕೈಕೊಂಡಾಡದೆ, ಕೊಂಡ ವ್ರತದಲ್ಲಿ ಮತ್ತೊಂದನೊಡಗೂಡಿ ಬೆರೆಯದೆ ವಿಶ್ವಾಸ ಗ್ರಹಿಸಿ ನಿಂದಲ್ಲಿ, ಆ ನಿಜಲಿಂಗವಲ್ಲದೆ ಮತ್ತೊಂದ ಪೆಜತನಱಿಯದೆ'ನಿಂದ ಸರ್ವಾಂಗ ಲಿಂಗಿ ಶರಣನಲ್ಲಿ (ಸಪ್ರುವ ೩ ಪು. ೨೬೮). ಮನುಷ್ಯರಂತೆ ಹುಟ್ಟು ಸಾವುಗಳನ್ನೊಳಗೊಂಡ ದೇವರನ್ನು ನಾನೊಲ್ಲೆ ಎಂದು ಜಗಳಗಂಟ ಕಾಮಣ್ಣ ತಿರಸ್ಕರಿಸುವನು (ಸಪ್ರುವ ೩ ಪು.೧೨೦). ನಗೆಯ ಮಾರಿತಂದೆಯು ಗುರುವು ಅನುಗ್ರಹಿಸಿದ ಇಷ್ಟಲಿಂಗವನ್ನು ದೇವರೆಂದಿದ್ದೆ, ಇದು ಮೆಲ್ಲಮೆಲ್ಲನೆ ಕಲ್ಲಾಗಿ ಬರುತ್ತಿದೆ ಇದ ನಾನೊಲ್ಲೆ ಎನ್ನುವನು (ಸಪ್ರುವ ೨ ವ. ೧೧೮೮). 'ಎನ್ನ ಬಡತನಕ್ಕೆ ಬೇಡುವಡೆ ಏನೂ ಇಲ್ಲ' ಆ ದೇವರಲ್ಲಿ ಎನ್ನುವ ಮಾತಿನ ವ್ಯಂಗ್ಯವನ್ನೂ, ಅದರೊಡನೆ ಧ್ವನಿತವಾಗುವ ಅವನ ಆತ್ಮವಿಶ್ವಾಸವನ್ನೂ ನಾವು ಪರಿಭಾವಿಸಬೇಕು (ಸಪ್ರುವ ೨ ವ. ೧೧೮೮). ಹರಿಗೆ ಚಕ್ರ ಥಾಣೆಯನ್ನೂ, ಬ್ರಹ್ಮನಿಗೆ ವೇದಪಾಶವನ್ನೂ, ಹಿರಿಯ ರುದ್ರನಿಗೆ ಜಡೆ ಜಪಮಣಿಯನ್ನೂ ಧರಿಸಿ, ಲೋಕದ ಜನ ಇವರನ್ನು ದೇವರೆಂದು ಕರೆದು ಪೂಜಿಸುವುದನ್ನು ಕಂಡು ಚೌಡಯ್ಯ ಸೋಜಿಗಗೊಳ್ಳುವನು. ಇವರಾರೂ ದೈವವಲ್ಲ, ಪರದೈವ ಬೇರೆ ಎಂದಿರುವನು(ವ. ೫).

ಕಲ್ಲು, ಮಣ್ಣು, ಮರಗಳನ್ನು ದೈವವೆಂದು ಪೂಜಿಸುವವರನ್ನು ಚೌಡಯ್ಯ ಖಂಡಿಸುತ್ತಾ, ಕಲ್ಲದೇವರ ಪೂಜೆಯ ಮಾಡಿ ಕಲಿಯುಗದ ಕತ್ತೆಗಳಾಗಿ ಹುಟ್ಟಿದರು. ಮಣ್ಣದೇವರ ಪೂಜಿಸಿ ಸ್ವರ್ಗಕ್ಕೇರದೆ ಹೋದರು !' ಎಂದಿರುವನು (ವ. ೧೫). ಅವನು ಕಲ್ಲು ಮಣ್ಣು ಮರಗಳನ್ನು ದೇವರೆಂದು ಪೂಜಿಸಿದವರು 'ಸ್ವರ್ಗಕ್ಕೇರದೆ ಹೋದರು !' ಎಂದು ಹೇಳುವಲ್ಲಿ ಮಾತಿನ ಮೊನಚು, ವ್ಯಂಗ್ಯ ತೀಕ್ಷ್ಣವಾಗಿದೆ. ದೇವರ ಪೂಜೆಗೆಂದು ಹೊತ್ತಾರೆ ಎದ್ದು ಪತ್ರೆ ಪುಷ್ಪಗಳಿಗೆ ಹೋಗುವವರನ್ನು ನೀವೇನು ಗಿಡದ ವೈರಿಗಳೋ ? ಗಿಡದ ದಾಯಾದ್ಯರೋ ? ಎಂದು ಪ್ರಶ್ನಿ

ಸುವನು (ವ. ೪೮). ದೇವರ ಶಿರದ ಮೇಲೆ ಒಟ್ಟುವ ಆ ತೊಪ್ಪಲನ್ನೇ ತಂದು ಬೇಯಿಸಿ ಹಸಿದ ಜಂಗಮನಿಗೆ ಬಡಿಸಿದರೆ, ಆ ಜಂಗಮದ ಬಸಿರು ತುಂಬಿದರೆ ಲಿಂಗದ ಹಸಿವು ಅಡಗಿದಂತೆಯೇ ಎಂದು ಚೌಡಯ್ಯ ಹೇಳುವನು (ವ. ೬೮, ೧೯೬). ದೇವಾಲಯ ನಿರ್ಮಿಸುವ ಅಣ್ಣಗಳನ್ನು ಕಂಡು, 'ದೇಹಾರವ ಮಾಡುವ ಅಣ್ಣಗಳಿರಾ, ಅಣ್ಣಗಳಿರಾ ! ಒಂದು ತುತ್ತು ಆಹಾರವನ್ನಿಕ್ಕಿರಯ್ಯಾ ! ದೇಹಾರಕ್ಕೆ ಆಹಾರವೆ ನಿಚ್ಚಣಿಕೆ, ದೇಹಾರವ ಮಾಡುತ್ತ ಆಹಾರವನಿಕ್ಕದಿರ್ದಡೆ ಆ ಹರನಿಲ್ಲ' ಎನ್ನುವನು (ವ. ೨೧೧). ಚೌಡಯ್ಯನ ಮನಸ್ಸು ಎಷ್ಟು ಮೃದು, ಮಾನವೀಯವಾದುದು ಎಂಬುದಕ್ಕೆ ಅವನ ಮೇಲಣ ಎರಡು ಧೋರಣೆಗಳು ನಿದರ್ಶನವಾಗಿವೆ.

ಬಹುರೂಪಿ ಚೌಡಯ್ಯನು ಧ್ಯಾನ, ಮೌನ, ಅನುಷ್ಠಾನ, ಜಪ, ತಪ, ಸಮಾಧಿ, ಸಂಧ್ಯಾ ನಿತ್ಯನೇಮಗಳಿಂದ ದೇವರನ್ನು ಕಾಣುವೆನೆಂಬ ಬಯಲ ಭ್ರಮೆಯುವರನ್ನು 'ಕಿಚ್ಚು ಬೆಳೆದ ಒಕ್ಕಲಿಗನಂತೆ ಫಲದಾಯಕರಾದರಯ್ಯಾ' ಎಂದು ಛೇಡಿಸಿ, ಇವೆಲ್ಲವುಗಳಿಂದ ಪರಮಾತ್ಮನನ್ನು ಕಾಣಲಾಗದು ಎಂದಿರುವನು (ಸಪುವ ೨ ವ. ೧೫೪೬). ಲದ್ದೆಯ ಸೋಮಯ್ಯನ ಬದುಕಿನ ಸಿದ್ಧಾಂತವೇ ಬೇರೆ. ಯಾವ ಕಾಯಕವಾದರೇನು ? ನಿನ್ನ ಕಾಯಕವನ್ನು ನೀನು ಮಾಡು. ವ್ಯಾಧಿ ಬಂದರೆ ನರಳು, ಬೇನೆ ಬಂದರೆ ಒರಲು, ಜೀವ ಹೋದರೆ ಸಾಯಿ, ಇದಕ್ಕಾವದೇವರ ಹಂಗೇಕೆ ? ಎಂದು ಕೇಳುವಷ್ಟು ಅವನು ವಾಸ್ತವವಾದಿ. ಭಕ್ತರಿಗೆ ಸುಖವೂ ಸರಿ, ದುಃಖವೂ ಸರಿ. ಉರಿಸಿರಿ ಉಭಯವೂ ಸರಿ, ಎನ್ನದಿರ್ದಡೆ ಭಕ್ತನಿಗದೇ ಹಾನಿ' ಎನ್ನುವ ಆರೋಗ್ಯಕರವಾದ ಮನಸ್ಸು ಮೇದಾರ ಕೇತಯ್ಯನದು (ಸಪುವ ೩ ಪು. ೨೫೪).

ಇಷ್ಟಲಿಂಗ ನಷ್ಟವಾದಾಗ ಸಂದೇಹಿಸಿ ಶೈಲ, ವಾರಿ, ಪಾಶ, ಶಸ್ತ್ರ, ಸಮಾಧಿ ಇವೇ ಮೊದಲಾದವುಗಳ ಮೂಲಕ ಪ್ರಾಣಬಿಡುವ ನಿಷ್ಠೆಯ ಭಕ್ತರೂ ಇದ್ದರು. ಒಮ್ಮೆ ಲಿಂಗ ನಷ್ಟವಾದರೆ ಮತ್ತೊಮ್ಮೆ ಲಿಂಗಧಾರಣೆ ಹೊಂದಕೂಡದೆಂಬ ನಿಯಮವೂ ಇದ್ದಿರಬಹುದು. ಇವೆರಡನ್ನೂ ಸಂಗಮೇಶ್ವರ ಅಪ್ಪಣ್ಣ ಖಂಡಿಸುವನು. ಇಷ್ಟಲಿಂಗ ನಷ್ಟವಾದರೆ ಪ್ರಾಣಬಿಡಬೇಕಾಗಿಲ್ಲ. ಮುಕ್ತಿಯ ದಾರಿಯಲ್ಲಿ ಹೋಗಲು ಧ್ಯಾನ, ಧಾರಣ ಸಮಾಧಿಯಲ್ಲಿರುವುದು ಸೂಕ್ತ. ಇಷ್ಟಲಿಂಗ ನಷ್ಟವಾದ ಭಕ್ತನು ಮರಳಿ ಲಿಂಗವನ್ನು ಧರಿಸಬೇಕಾಗಿಲ್ಲ. ಹಣದಾಸೆಗೆ ಮರಳಿ ಲಿಂಗಧಾರಣೆ ಮಾಡುವ ಗುರು ಶಿವದ್ರೋಹಿ ; ಮರಳಿ ಲಿಂಗವನ್ನು ಧರಿಸಿ ಪೂಜೆ ಮಾಡುವ ಶಿಷ್ಯ ಗುರುದ್ರೋಹಿ. ಇವರು ಅಷ್ಟಾವರಣ ಬಾಹಿರರು, ಸತ್ಪಥಕ್ಕೆ ಸಲ್ಲರು ; ಇವರು ಕಂಡ ಕಂಡವರೊಡನೆ ಓಡಾಡುವ ಚಾಂಡಾಲಗಿತ್ತಿಯಂತೆ. ಇಂತಹವರ ಮುಖದರ್ಶನ ಮಾಡಲಾಗದು (ಸಪುವ ೩ ಪು. ೩೦೫, ೩೦೬) ಎಂದು ಅವನು ಹೇಳುವನು.[1] ಇಷ್ಟಲಿಂಗ

---

1. ಅಮುಗೆ ರಾಯಮ್ಮ ತನ್ನ ಒಂದು ವಚನದಲ್ಲಿ, ಇಷ್ಟಲಿಂಗ ಭಿನ್ನವಾಗಲು ಮತ್ತೊಂದು

ನಷ್ಟವಾದರೆ ಪ್ರಾಣಬಿಡಬೇಕೆಂಬ ವೀರವ್ರತ ತೊಟ್ಟ ಭಕ್ತರಿದ್ದರೆಂಬುದು ಹುಸಿಯಲ್ಲ. ಶಿವಶರಣರ ವಚನಗಳಲ್ಲಿ ಇದಕ್ಕೆ ಸಾಕ್ಷ್ಯಾಧಾರಗಳಿವೆ. 'ವ್ರತ'ವನ್ನು ಕಟ್ಟುನಿಟ್ಟಾಗಿ ಆಚರಿಸುತ್ತಿದ್ದ ಕ್ರಮ ಮೇಲುವರ್ಗದವರಲ್ಲಿ ಮಾತ್ರವಲ್ಲದೆ ಕೆಳವರ್ಗದ ವಚನಕಾರರಲ್ಲೂ ನಾವು ನೋಡಬಹುದು. ಭಿಕಾರಿ ಭೀಮಯ್ಯ 'ವ್ರತ ಹೋದವರು ಸುಳಿಯದಿರಿ, ಕಂಡಡೆ ಕೊಲುವ ಬಿರಿದು' ತನ್ನದೆಂದು ಹೆಮ್ಮೆಯಿಂದ ಹೇಳಿಕೊಳ್ಳುವನು (ಸಪುವ ೩ ಪು. ೧೮೮). ವ್ರತ ಹೋಗಲು ಆ ಕ್ಷಣ ಭ್ರಷ್ಟನೆಂದು ಭಕ್ತರು ಭಾವಿಸುವರು, ಸ್ನೇಹಭಾವದಿಂದ ಕೂಡರು. ಆದಕಾರಣ, ವ್ರತ ನಷ್ಟವಾದಲ್ಲಿ 'ಆ ಕ್ಷಣ ಮರಣವಯ್ಯ' ಎಂದು ಎಲೆಗಾರ ಕಾಮಣ್ಣ ಭೀತನಾಗಿ ನುಡಿಯುವನು (ಸಪುವ ೩ ಪು. ೭೮). ಯಾರಿಗೂ ಸಾವಿನಿಂದ ತಪ್ಪಿಸಿಕೊಳ್ಳಲು ಸಾಧ್ಯವಿಲ್ಲ. ಇದನ್ನು ತಿಳಿದೂ ವ್ರತಭಂಗಿತನಾಗಿ ಸಾಯುವುದೇಕೆ ? ನಿಂದೆಗೆ ಒಳಗಾಗುವ ಮುನ್ನವೆ ಪ್ರಾಣಬಿಡುವ ಧೀರ ನಿರ್ಧಾರ ಕರುಳ ಕೇತಯ್ಯನದು (ಸಪುವ ೩ ಪು. ೭೮). 'ಹುಂಜ ಸೋತಡೆ ಹಿಡಿವೆ. ವ್ರತ ಹೋದರೆ ನೋಡೆನು ಚಂದ್ರಚೂಡೇಶ್ವರ ಲಿಂಗವೆ' ಎಂದು ಹುಂಜಿನ ಕಾಳಗದ ದಾಸಯ್ಯ ಪ್ರತಿಜ್ಞೆ ತೊಡುವನು (ಸಪುವ ೩. ಪು. ೩೪೨). ಮಡಿವಾಳ ಮಾಚಿದೇವನದು ಪರಸ್ತ್ರೀ ಸಂಗವ ಮಾಡದ ವ್ರತ. 'ಪರಸ್ತ್ರೀಯರ ನೋಡುವ ಕಣ್ಣು ಲಿಂಗವ ನೋಡಿದರೆ ಅವರಿಗೆ ಲಿಂಗವಿಲ್ಲ. ಪರಬ್ರಹ್ಮನ ನುಡಿವ ನಾಲಿಗೆಯಲ್ಲಿ ಪರಸ್ತ್ರೀಯರ ಅಧರಪಾನವ ಕೊಂಡಡೆ ಪ್ರಸಾದಕ್ಕೆ ದೂರ. ಘನಲಿಂಗವ ಪೂಜಿಸುವ ಕೈಯಲ್ಲಿ ಪರಸ್ತ್ರೀಯರ ತೋಳು ಕುಚವ ಮುಟ್ಟಿದಡೆ ತಾ ಮಾಡುವ ಪೂಜೆ ನಿಷ್ಫಲ. ಇದ ನಚಿತಡೆ ವ್ರತ. ಅಲ್ಲದಿದ್ದಡೆ ಸುರೆಯ ಮೊಳಗೆ ತುಂಬಿ ಹೊರಗೆ ಬೂದಿಯ ಪೂಸಿದಂತಾಯಿತ್ತು' ಎಂದು ಅವನು ಹೇಳುವನು (ಸಪುವ ಪು. ೨೦೮).

ವ್ರತ ನೇಮ, ಸಪ್ಪೆ, ಒರತೆ ಮೊದಲಾದ ನೀರ್ವಿಡಿಯ ನೇಮಗಳನ್ನು ತಪ್ಪದೆ ಪಾಲಿಸುವ ಅಂತರಂಗ ಶುದ್ಧವಿಲ್ಲದ ಭಕ್ತರನ್ನು ಮಡಿವಾಳ ಮಾಚಿದೇವ ತನ್ನ ಹಲವಾರು ವಚನಗಳಲ್ಲಿ ಖಂಡಿಸಿರುವನು. ಅವನ ಪ್ರಕಾರ, ವ್ರತ ನಿಶ್ಚಯವಾದರೆ ಪರಸ್ತ್ರೀ, ಪರಧನ, ಪರದೂಷಣೆಯನ್ನರಿತು ಬಿಟ್ಟರೆ ಅದು ಅರುವತ್ತಾರು ವ್ರತಗಳಿಗೆ ಕಡೆ. ಶೀಲ ಶೀಲ ಎಂದು ಹೇಳಿ ಹಣ್ಣು, ಹಾಲು, ಮೊಸರು, ಅಕ್ಕಿ, ಗೋಧಿ, ಬೇಳೆ, ಬೆಲ್ಲ, ನೀರು, ಉಪ್ಪು, ಎಣ್ಣೆ–ಹೀಗೆ ಸಕಲ ಪದಾರ್ಥಗಳಿಗೂ ಶೀಲದ ಕಟ್ಟಳೆ ವಿಧಿಸುವ

---

ಲಿಂಗವನ್ನು ವೀರಶೈವನಾದವನು ಧರಿಸಬೇಕಾಗಿಲ್ಲ. ಇದಕ್ಕೆ ಪುರಾತನರಲ್ಲೂ ಪುರಸ್ಕಾರವಿಲ್ಲ. ಮತ್ತೊಮ್ಮೆ ಲಿಂಗಧಾರಣೆ ಮಾಡುವವನಿಗೆ ಆಚಂದ್ರಾರ್ಕ ನಾಯಕನರಕ ಎಂದು ಬೆದರಿಕೆಯೊಡ್ಡಿರುವಳು. ಅಷ್ಟೇ ಅಲ್ಲ, 'ಶರಣರು ಲಿಂಗ ಭಿನ್ನವಾಗಲು ಲಿಂಗದೊಡನೆ ಅಂಗವ ಬಯಲು ಮಾಡುವರಯ್ಯಾ' ಎಂದೂ ಹೇಳುವಳು. ಸತ್ಯಕ್ಕ ಮಂತ್ರ ಭಿನ್ನವಾಯಿತೆಂದು ಕಂಥೆಯ ಬಿಡುವವರನ್ನು ಕಂಡು ಇದು ಜ್ಞಾನಿಗಳಾದವರು ಮಾಡುವ ಕಾರ್ಯವೆ? ಎಂದು ಕೇಳಿರುವರು.

ಶೀಲಸಂಪನ್ನರ ಆಚರಣೆಯನ್ನು ಅಂಬಿಗರ ಚೌಡಯ್ಯ ತನ್ನ ಒಂದು ವಚನದಲ್ಲಿ (ವ. ೨೪೫) ತೀವ್ರವಾಗಿ ಟೀಕಿಸಿರುವನು. ನಮಗೊಬ್ಬರ ಎಂಜಲು ಸೇರದು ಎಂದು ಹೇಳಿ ಮಡಿಯಾಗಿ ಬಂದು ಕುಳಿತವರನ್ನು ಅವನು ಬರಿಯ ಮಾತಿನ ಭುಂಜಕರೆಂದು ಕರೆದು ಲೇವಡಿ ಮಾಡುವನು (ವ. ೨೪೬). ಇಷ್ಟಕ್ಕೂ ತೃಪ್ತನಾಗದ ಅವನು 'ಶೀಲ ವಂತನೆಂಬವ ಶಿವದ್ರೋಹಿ ; ಭಾಷೆವಂತನೆಂಬವ ಬ್ರಹ್ಮೇತಿಕಾಱ ; ನೇಮಸ್ತನೆಂಬವ ನೇಮಕ್ಕೆ ಗುಱಿಯಾದ ; ಅಚ್ಚಪ್ರಸಾದಿ ನಿಚ್ಚಕುನ್ನಿ. ಇವರು ನಾಲ್ವರು ಹೋದಲ್ಲಿ ಹೋಗಲಾಗದು ; ಬಂದಲ್ಲಿ ಬರಲಾಗದು ; ನಿಂತಲ್ಲಿ ನಿಲಲಾಗದು ; ಕುಳಿತಲ್ಲಿ ಕುಳ್ಳಿರ ಲಾಗದು' ಎಂದು ಬಹಿಷ್ಕಾರವನ್ನೂ ಹಾಕುವನು (ವ. ೧೭೪).

ಬಸವಾದಿ ಶಿವಶರಣರು ನಡೆಸಿದ ವೈಚಾರಿಕ ಕ್ರಾಂತಿಯ ಫಲವಾಗಿ ಸ್ತ್ರೀಯರಲ್ಲೂ ಜಾಗೃತಿಯುಂಟಾಯಿತು. ಸುತ್ತಣ ಬದುಕಿನ ಆಗುಹೋಗುಗಳ ಬಗೆಗೆ ವಿಚಾರ ಮಾಡುವ, ಸ್ಪಂದಿಸುವ ಸ್ವಾತಂತ್ರವಿಲ್ಲದೆ ಪುರುಷನ ದಬ್ಬಾಳಿಕೆಗೆ ಒಳಗಾಗಿ ನಾಲ್ಕು ಗೋಡೆಗಳ ನಡುವಣ ಪ್ರಪಂಚವೇ ತನ್ನ ಪ್ರಪಂಚವೆಂದು ಭಾವಿಸಿ ದುಡಿಮೆಯ ನೊಗಕ್ಕೆ ಕಟ್ಟಿಬಿದ್ದಿದ್ದ ಸ್ತ್ರೀಗೆ ಪುರುಷರಷ್ಟೇ ಸಮಾನ ಸ್ವಾತಂತ್ರ್ಯ ಬಸವಾದಿ ಶರಣರ ಪ್ರಯತ್ನದ ಫಲವಾಗಿ ಲಭ್ಯವಾಯಿತು. ಆಕೆ ವಿದ್ಯೆ ಕಲಿತದ್ದಲ್ಲದೆ, ತನ್ನ ಆಲೋಚನೆ ಗಳನ್ನು ಗಟ್ಟಿಯಾಗಿ ಹೇಳುವ ಮುಕ್ತ ವಾತಾವರಣದಲ್ಲಿ ಉಸಿರಾಡತೊಡಗಿದಳು. ಮೇಲುವರ್ಗದ ಸ್ತ್ರೀಯರು ತಮ್ಮ ದೈನಂದಿನ ಅನುಭವ ಅನಿಸಿಕೆಗಳನ್ನು ವಚನ ರೂಪದಲ್ಲಿ ಹೇಳುವ ಸಾಹಸ ಮಾಡಿದರು. "ನೀಲಲೋಚನೆಯಂಥವರು ವಚನಗಳನ್ನು ಬರೆದದ್ದು ದೊಡ್ಡದೇ ನಿಜ. ಆದರೆ ಸೇವಕ ವೃತ್ತಿಯ ಹಡಪದ ಅಪ್ಪಣ್ಣನಂತಹ ಕೆಳವರ್ಗದವನ ಹೆಂಡತಿ 'ಕೇಳಿರೋ ಮನುಜರಿರಾ' ಎಂದು ಸಂಬೋಧಿಸಿ, 'ನಿರಾಳ ಲಿಂಗ'ದ ಬಗ್ಗೆ 'ಬಚ್ಚ' ಬರಿಯ ಬೆಳಗಿನ ಬಗ್ಗೆ ಮಾತನಾಡುವುದು ಒಂದು ಪವಾಡ ವಾಗಿ ಕಾಣುತ್ತದೆ."[1] ಕೆಳವರ್ಗದವರು ಎಚ್ಚೆತ್ತ ಶುಭ ಸೂಚನೆ ಕೆಳವರ್ಗದ ಸ್ತ್ರೀಯರು ರಚಿಸಿದ ವಚನಗಳಲ್ಲಿ ತೋರುತ್ತದೆ.

ಸಾಮಾಜಿಕ ನೆಲೆಯಲ್ಲಿ ಮನುಷ್ಯರನ್ನು ಬೇರೆ ಬೇರೆಯಾಗಿ ವರ್ಗೀಕರಿಸುವುದು ಜಾತಿ. ಉತ್ತಮ, ಅಧಮ ಎಂಬ ಎರಡು ಜಾತಿಗಳು ಸಾಮಾಜಿಕವಾಗಿ, ಆರ್ಥಿಕವಾಗಿ ಉಳ್ಳವರು, ಇಲ್ಲದವರು ಎಂಬ ಎರಡು ವರ್ಗಗಳನ್ನು ಸಹಜವಾಗಿ ಸೃಷ್ಟಿಸುತ್ತವೆ. ಉಳ್ಳವರು ಪ್ರತಿಷ್ಠಿತರಾಗಿ, ಉತ್ತಮರಾಗಿ ; ಇಲ್ಲದವರು ಹಿಂದುಳಿದವರಾಗಿ, ಅಧಮ ರಾಗಿ ಸಾಮಾಜಿಕ ಸ್ಥಾನಮಾನ ಪಡೆಯುವರು. ಮನುಷ್ಯ, ಮನುಷ್ಯರ ನಡುವೆ ಗೋಡೆಗಳಾಗುವುದನ್ನು ; ಮಾನವೀಯತೆಯನ್ನು ಮರೆಸಿ ಮೇಲು, ಕೀಳೆಂಬ ಕೃತಕ

---

1. ಡಾ॥ ಎಂ. ಚಿದಾನಂದಮೂರ್ತಿ : ವಚನ ಸಾಹಿತ್ಯ (೧೯೭೫). ಪು. ೧೪೩.

ಹಾಗೂ ಅರ್ಥಹೀನ ವ್ಯವಸ್ಥೆಯನ್ನುಂಟು ಮಾಡುವುದನ್ನು ವಚನಕಾರರು ಉಗ್ರವಾಗಿ ವಿರೋಧಿಸಿದರು. ವಚನಕಾರ್ತಿಯರಲ್ಲಿ ಕಾಳವ್ವೆ ಈ ಬಗೆಯ ಧೋರಣೆಯನ್ನು ಬಲವಾಗಿ ಟೀಕಿಸಿರುವಳು. ಕುರಿ, ಕೋಳಿ, ಮೀನುಗಳನ್ನು ತಿನ್ನುವವರನ್ನು ಉತ್ತಮ ಕುಲಜರೆಂದೂ. ಶಿವನಿಗೆ ಹಾಲನ್ನು ಕರೆವ ಹಸುವನ್ನು ತಿನ್ನುವವರನ್ನು ಕೀಳುಜಾತಿಯವರೆಂದೂ ವರ್ಗೀಕರಿಸುವ ಸಮಾಜದ ಧೋರಣೆಯನ್ನು ಅವಳು ಖಂಡಿಸುತ್ತಾ "ಅವರೆಂತು ಕೀಳುಜಾತಿಯವರಾದರು ? ಜಾತಿಗಳು ನೀವೇಕೆ ಕೀಳಾಗಿರೊ ? ಬ್ರಾಹ್ಮಣ ನುಂಡುದು ಪುಲ್ಲಿಗೆ ಶೋಭಿತವಾಗಿ ನಾಯಿ ನೆಕ್ಕಿಹೋಯಿತು. ಮಾದಿಗರುಂಡುದು ಪುಲ್ಲಿಗೆ ಬ್ರಾಹ್ಮಣಗೆ ಶೋಭಿತವಾಯಿತು. ಅದೆಂತೆಂದಡೆ : ಸಿದ್ದಲಿಕೆಯಾಯಿತು, ಸಗ್ಗಳೆಯಾಯಿತು. ಸಿದ್ಧಲಿಕೆಯ ತುಪ್ಪವನು, ಸಗ್ಗಳೆಯ ನೀರನು ಶುದ್ಧವೆಂದು ಕುಡಿದ ಬುದ್ಧಿಗೇಡಿ ವಿಪ್ರರಿಗೆ ನಾಯಕ ನರಕ ತಪ್ಪದಯ್ಯಾ" ಎನ್ನುವಳು (ಶಿವಶ. ವ. ೨೧೭). ಸಾಮಾಜಿಕ ವ್ಯವಸ್ಥೆಯಲ್ಲಿ ಪಟ್ಟಭದ್ರರಾಗಿ ಮಾನವೀಯತೆ ಮರೆತು ಶೋಷಣೆ ನಡೆಸಿದ ಪುರೋಹಿತ ವರ್ಗದ ಬಗೆಗೆ ಶೋಷಣೆಗೊಳಗಾದವರ ಎದೆಬೇಗೆ ಅವರ ಮಾತುಗಳಲ್ಲಿ ಉಂಡೆಯಾಗಿ ಸಿಡಿದಿದೆ. ಕಾಳವ್ವೆಯು ಅಂತಹವರ ಪ್ರತಿನಿಧಿ. 'ಶಿವಭಕ್ತ ಹೊತ್ತರೆದ್ದು ಗುರು ಲಿಂಗ ಜಂಗಮಕ್ಕೆ ಶರಣೆನ್ನದೆ ಮುನ್ನ ಒಂಟಿ ಬ್ರಾಹ್ಮಣನ ಕಂಡು ಶರಣಾರ್ಥಿ ಎಂದಡೆ ಎಂಬತ್ತುನಾಲ್ಕು ಲಕ್ಷ ಯೋನಿಯಲ್ಲಿ, ಹಂದಿಯ ಬಸುರಲ್ಲಿ ಬಪ್ಪದು ತಪ್ಪದು ಕಾಣಾ' ಎನ್ನುವ ಅವಳ ಮಾತಿನಲ್ಲಿ ತಪ್ತ ಮನಸ್ಸಿನ ಆ ತೀಕ್ಷ್ಣ ರೋಶವನ್ನು ಗುರುತಿಸಬಹುದು.

ವಚನಕಾರರಂತೆ ವಚನಕಾರ್ತಿಯರೂ 'ಕಾಯಕ ತತ್ತ್ವ'ವನ್ನು ಬಲವಾಗಿ ಪ್ರತಿಪಾದಿಸಿರುವರು.1 ಆಯ್ದಕ್ಕಿ ಲಕ್ಕಮ್ಮ 'ಕಾಯಕ ತತ್ತ್ವ'ಕ್ಕೆ ಇರುವ ಬಹು ದೊಡ್ಡ ಗೌರವಾದರಗಳನ್ನು ತನ್ನ ಬದುಕಿನಲ್ಲಿ ತೋರಿದವಳು. ಇವಳ ಪತಿ ಮಾರಯ್ಯ ಬಸವಣ್ಣನ ಮನೆಯ ಅಂಗಳದಲ್ಲಿ ಬಿದ್ದಿದ್ದ ಬತ್ತವನ್ನು ನಿತ್ಯಕ್ಕೆ ಎಷ್ಟು ಬೇಕೋ ಅಷ್ಟು ತರದೆ ಆಸೆಯಿಂದ ಹೆಚ್ಚಿಗೆ ತರಲು 'ಆಸೆಯೆಂಬುದು ಅರಸಿಂಗಲ್ಲದೆ ಶಿವಭಕ್ತರಿಗುಂಟೆ ? ....ಈ ಪರಿಯಾಸೆ ನಿಮಗೇಕೆ ? ಈಶ್ವರನೊಪ್ಪ' ಎಂದು ಲಕ್ಕಮ್ಮ ಗಂಡನನ್ನು ಆಕ್ಷೇಪಿಸಿ 'ಭಕ್ತರು ಕಾಯಕವೆಂದು ದಾಯಗಾರಿಕೆಯಲ್ಲಿ ತಂದು ದಾಸೋಹವ ಮಾಡ

---

1. ಕಾಯಕ ಯಾವುದೇ ಇರಲಿ, ಎಲ್ಲಕ್ಕೂ ಸಮಾನವಾದ ಗೌರವ ಬಸವಣ್ಣನ ಅನುಯಾಯಿಗಳಲ್ಲಿ. ಕಾಯಕದಲ್ಲಿ ಮೇಲು ಕೀಳೆಂಬ ಭಾವನೆಗೆ ಅವರಲ್ಲಿ ಅವಕಾಶವಿಲ್ಲ. ಈ ಸಮಾನತೆಯ ಪರಿಸರದಲ್ಲಿ ಹಾದರದ ಕಾಯಕದ ಮಾರಯ್ಯಗಳ ಪುಣ್ಯಸ್ತ್ರೀ ಗಂಗಮ್ಮನಿಗೆ 'ಆವ ಕಾಯಕವ ಮಾಡಿದಡೂ ಒಂದೆ ಕಾಯಕವಯ್ಯಾ' (ಸಪುವ. ೩ ಪು. ೩೪೧) ಎಂದು ಹೇಳುವಷ್ಟು ಅಭಿಪ್ರಾಯ ಸ್ವಾತಂತ್ರ್ಯ ! ಕೆಳವರ್ಗದ ಹೆಣ್ಣೊಬ್ಬಳು ಹೀಗೆ ನುಡಿಯುವ ಎದೆಗಾರಿಕೆ ತೋರಿದಳಲ್ಲಾ ಎಂಬುದು ಇಲ್ಲಿ ಮುಖ್ಯ.

ಬಹುದೆ ? ಒಮ್ಮನವ ತಂದು ಒಮ್ಮನದಲ್ಲಿಯೆ ಮಾಡಿ ಇಮ್ಮನವಾಗದ ಮುನ್ನವೆ ಮಾರಯ್ಯ ಪ್ರಿಯ ಅಮಲೇಶ್ವರ ಲಿಂಗಕ್ಕೆ ಸಲಬೇಕು' ಎಂದು ಹಿತ ನುಡಿಯುವಳು. ಶುದ್ಧಚಿತ್ತದಿಂದ ಕಾಯಕ ಮಾಡಿದಲ್ಲಿ 'ಸದ್ಭಕ್ತಂಗೆ ಎತ್ತ ನೋಡಿದಡತ್ತ ಲಕ್ಷ್ಮಿ ತಾನಾಗಿಪ್ಪಳು' ಎಂಬುದು ಇವಳ ಬಾಳಿನ ನಂಬುಗೆ. 'ಲಿಂಗಕ್ಕೆ ಬಡತನವಲ್ಲದೆ ಮನಕ್ಕೆ ಬಡತನವುಂಟೆ ? ಬೆಟ್ಟ ಬಲ್ಲಿತ್ತೆಂದಡೆ, ಉಳಿಯ ಮೊನೆಯಲ್ಲಿ ಬಡತನವಿದ್ದರೆ ಒಡೆಯದೆ ? ಘನ ಶಿವಭಕ್ತರಿಗೆ ಬಡತನವಿಲ್ಲ, ಸತ್ಯರಿಗೆ ದುಷ್ಕರ್ಮವಿಲ್ಲ' ಎಂಬ ಇವಳ ಆತ್ಮವಿಶ್ವಾಸದ ಮಾತುಗಳು ಕೆಳವರ್ಗದ ಓರ್ವ ಸ್ತ್ರೀಯು ಪರಿಶುದ್ಧ ಹಾಗೂ ಪ್ರಾಮಾಣಿಕ ಬಾಳ್ವೆಯ ಸರಳ ಸೂತ್ರಗಳನ್ನು ನಮ್ಮ ಮುಂದಿಡುವಂತಿದೆ. 'ಲಂಚವಚನಕ್ಕೆ ಕೈಯಾನದ ಭಾಷೆ, ಬಟ್ಟೆಯಲ್ಲಿ ಹೊನ್ನು ವಸ್ತ್ರ ಬಿದ್ದಿದ್ದಡೆ, ಕೈಮುಟ್ಟಿ ಎತ್ತಿದೆನಾದಡೆ ಅಯ್ಯಾ, ನಿಮ್ಮಾಣೆ. ನೀವಿಕ್ಕಿದ ಭಿಕ್ಷೆಯೊಳಗಿಪ್ಪೆನಯ್ಯಾ' ಎನ್ನುವ ಸತ್ಯಕ್ಕ ಇಡೀ ಸ್ತ್ರೀ ಸಮುದಾಯಕ್ಕೇ ತನ್ನ ಈ ಆದರ್ಶದಿಂದ ಕೀರ್ತಿ ತಂದಿರುವಳು.

ವಚನಕಾರ್ತಿಯರಲ್ಲಿ ಬಹುಪಾಲು ಮಂದಿ ವ್ರತ, ನೇಮ, ಶೀಲಗಳಿಗೆ ಹೆಚ್ಚಿನ ಮೌಲ್ಯವನ್ನು ತಮ್ಮ ಕುಟುಂಬವಾಳ್ಕೆಯಲ್ಲಿ ಕೊಟ್ಟಿರುವುದು ಅವರ ವಚನಗಳಿಂದ ತಿಳಿದು ಬರುತ್ತದೆ. ಹೊರಗೆ ದುಡಿಯುವ ಗಂಡಿಗಿಂತ ಮನೆಯ ಒಳಗೆ ಬಾಳುವೆ ನಡೆಸುವ ಹೆಣ್ಣಿಗೆ ವ್ರತ, ಆಚಾರಗಳ ಕಟ್ಟುಪಾಡು ಸಹಜ. ಕುಟುಂಬದ ಸಮಸ್ತ ಜವಾಬ್ದಾರಿಯನ್ನು ಹೊತ್ತುನಿಂತ ಹೆಣ್ಣಿಗೆ ಸತ್ಪಥದಲ್ಲಿ ನಡೆಯಲು ಇವು ಒಂದು ವಿಧದಲ್ಲಿ ಸಹಾಯ ಮಾಡಬಹುದೇನೋ ? (ಉರಿಲಿಂಗಪೆದ್ದಿಗಳ ಪುಣ್ಯಸ್ತ್ರೀ) ಕಾಳವ್ವೆಯು ತನ್ನ ವಚನವೊಂದರಲ್ಲಿ 'ವ್ರತ'ವನ್ನು ನಾಯಕರತ್ನ, ಸುಪ್ರಾಣಿಯ ಮುತ್ತು, ಜೀವನ ಕಳೆ, ಸುಯಿದಾನ–ಎಂದೆಲ್ಲಾ ವಿಶೇಷಿಸಿ ಕರೆದಿರುವಳು. ವ್ರತಹೀನರನ್ನು ಎಲ್ಲ ವಚನಕಾರ್ತಿಯರೂ ಉಗ್ರವಾಗಿ ಖಂಡಿಸುವರು. ವ್ರತಹೀನನ ಸಂಗ ನರಕಕ್ಕೆ ಮೂಲ ಎಂದು ಗುಂಡಯ್ಯಗಳ ಪುಣ್ಯಸ್ತ್ರೀ ಕೇತಲದೇವಿ (ಸಪುವ ೩ ಪು.೧೧೦), ಬತ್ತಲೇಶ್ವರ ದೇವರ ಪುಣ್ಯಸ್ತ್ರೀ ಗುಡ್ಡವ್ವೆ (ಸಪುವ ೩ ಪು. ೧೫೩). ಬಾಚಿಕಾಯಕದ ಬಸವಪ್ಪಯ್ಯಗಳ ಪುಣ್ಯಸ್ತ್ರೀ ಕಾಳವ್ವೆ (ಸಪುವ ೩ ಪು. ೧೬೫), ಕೊಟ್ಟಣದ ಸೋಮಮ್ಮ (ಸಪುವ ೩ ಪು. ೯೭), ದಸರಯ್ಯಗಳ ಪುಣ್ಯಸ್ತ್ರೀ ವೀರಮ್ಮ (ಸಪುವ ೩ ಪು. ೧೨೯). ರಾಯಸದ ಮಂಚಣ್ಣಗಳ ಪುಣ್ಯಸ್ತ್ರೀ ರಾಯಮ್ಮ (ಸಪುವ ೩ ಪು. ೨೬೩) –ಇವರೇ ಮೊದಲಾದವರು ಎಚ್ಚರಿಸಿರುವರು. ವ್ರತಭ್ರಷ್ಟ ಲಿಂಗಬಾಹ್ಯನ ಕಂಡರೆ 'ಸತ್ತನಾಯ ಕಾಗೆಯ ಕಂಡಂತೆ' ಎಂದು ಸಿದ್ಧಬುದ್ಧಯ್ಯಗಳ ಪುಣ್ಯಸ್ತ್ರೀ ಕಾಳವ್ವೆಯು ಹೇಸಿಕೆಗೊಂಡು ನುಡಿದಿರುವಳು (ಸಪುವ ೩ ಪು. ೩೨೨). 'ವ್ರತಹೀನನನರಿದು ಬೆರೆದಡೆ ಕಾದ ಕತ್ತಿಯಲ್ಲಿ ಕೈ ಕಿವಿ ಮೂಗ ಕೊಯ್ವರಯ್ಯಾ ಒಲ್ಲೆನೊಲ್ಲೆ' ಎಂದು ಸೂಳೆ ಸಂಕವ್ವೆ ವ್ರತಹೀನರನ್ನು ತಿರಸ್ಕರಿಸುವಳು (ಸಪುವ ೩ ಪು. ೩೨೯). ಕಾಟಕೂಟಯ್ಯಗಳ ಪುಣ್ಯಸ್ತ್ರೀ ರೇಚವ್ವೆಯು 'ವ್ರತಹೀನರ ಬೆರೆಯಲುಂಟೆ? ನೀ ಬೆರೆದಡೂ

ಬೆರೆ ನಾನೊಲ್ಲೆ' ಎಂದು ತನ್ನ ಇಷ್ಟದೈವವಾದ ನಿಜಶಾಂತೇಶ್ವರನಿಗೇ ಬೆದರಿಕೆಯೊಡ್ಡುವಳು (ಸಪುವ ೩ ಪು. ೫೯). ಕಾಲುಕಣ್ಣಿಯ ಕಾಮಮ್ಮನು 'ವ್ರತಭ್ರಷ್ಟರನಿಟ್ಟೊರಸುವೆ ಸುಟ್ಟುಸುಟ್ಟು ತುರುತುರನೆ ತೂಱುವೆ' ಎಂದು ಪ್ರತಿಜ್ಞೆಯನ್ನೇ ತೊಟ್ಟಿರುವಳು (ಸಪುವ ೩ ಪು. ೮೧). ಕೊಂಡೆಯ ಮಂಚಣ್ಣಗಳ ಪುಣ್ಯಸ್ತ್ರೀ ಲಕ್ಷ್ಮಮ್ಮನು ವ್ರತ ತಪ್ಪಲು ಶರೀರವನ್ನೇ ಬಿಡಬೇಕೆಂದಿರುವಳು (ಸಪುವ ೩ ಪು. ೯೬). ಅಕ್ಕಮ್ಮ ತನ್ನ ಬಹುಪಾಲು ವಚನಗಳಲ್ಲಿ ವ್ರತ, ನೇಮ, ಶೀಲಗಳ ಬಗೆಗೆ ದೀರ್ಘವಾಗಿ ಚರ್ಚಿಸಿರುವಳು.1 ಅವಳು ತನ್ನ ಕಾಲದ, ತನ್ನ ಪರಿಸರದ ವ್ರತ, ನೇಮ, ಶೀಲಗಳನ್ನು ಕುರಿತೇ ಹೆಚ್ಚು ವಿಚಾರ ಮಾಡಿರುವಳು. ವ್ರತ, ನೇಮ, ಶೀಲಗಳೇ ಪ್ರಧಾನವಾದ ಸ್ತ್ರೀಯರ ನಡುವೆ ಅವೆಲ್ಲವನ್ನೂ ಒಪ್ಪದ ಸತ್ಯಕ್ಕನಂತಹ ಸ್ವತಂತ್ರ ವಿಚಾರವಾದಿಯೂ ಕಾಣಬರುವಳು. 'ಅರ್ಚನೆ, ಪೂಜನೆ ನೇಮವಲ್ಲ; ಮಂತ್ರ, ತಂತ್ರ, ನೇಮವಲ್ಲ; ಧೂಪ ದೀಪಾರತಿ ನೇಮವಲ್ಲ; ಪರಧನ, ಪರಸ್ತ್ರೀ, ಪರದೈವಂಗಳಿಗೆಱಗದಿಪ್ಪುದೆ ನೇಮ, ಶಂಭು ಜಕ್ಕೇಶ್ವರನಲ್ಲಿ ಇವು ಕಾಣೆರಣ್ಣಾ ನಿತ್ಯ ನೇಮ' ಎಂಬ ಅವಳ ವಿಚಾರಧಾರೆ ಪರಿಸರದ ಒಮ್ಮುಖವಾದ ನಿಲುಮೆಯನ್ನು ಮೀರಿ ನಿಲ್ಲುತ್ತದೆ.

ವಯಸ್ಸಿನಲ್ಲಿ ಹಿರಿಯರಾಗಿ ಜ್ಞಾನದಲ್ಲಿ ಕಿರಿಯರಾಗಿದ್ದ ಬತ್ತಲಿಗರು, ಮಂಡೆಬೋಳಾದವರು, ಜಡೆಗಟ್ಟಿದವರು--ಈ ಪ್ರಕಾರದ ವೇಷಧಾರಿಗಳನ್ನು, ಕಪಟಿಗಳನ್ನು ವಚನಕಾರ್ತಿಯರು ಕಟುವಾಗಿ ಟೀಕಿಸಿರುವರು. ಅಕ್ಕಮ್ಮ ಇಂತಹವರನ್ನು ಕಂಡು

ಬತ್ತಲೆ ಇದ್ದವರೆಲ್ಲಾ ಕತ್ತೆಯ ಮರಿಗಳು
ತಲೆ ಬೋಳಾದವರೆಲ್ಲಾ ಮುಂಡೆಯ ಮಕ್ಕಳು

---

1. ಅಕ್ಕಮ್ಮನು ಒಂದು ವಚನದಲ್ಲಿ 'ಅರುವತ್ತು ನಾಲ್ಕು ಶೀಲ, ಐವತ್ತಾರು ನೇಮ, ಮೂವತ್ತೆರಡು ಕೃತ್ಯಗಳಿರುವುದನ್ನು ಪ್ರಸ್ತಾಪಿಸಿರುವಳು. (ನೋಡಿ: ಶಿವಶರಣೆಯರ ವಚನಗಳು, ಪು. ೪೩೪ ವ. ೯೦) ಭಕ್ತನಾದವನು ಇವನ್ನು ಆಚರಿಸುವ ರೀತಿಯನ್ನು ಹೇಳುವ ಅಕ್ಕಮ್ಮ ಇವುಗಳಿಗೆ ತಪ್ಪಿ ನಡೆಯುವವರನ್ನೂ, ಇವುಗಳ ಹೆಸರು ಹೇಳಿ ಹೊಟ್ಟೆಹೊರೆಯುವ ಭಂಡರನ್ನೂ ಹಲವೆಡೆ ಟೀಕಿಸಿರುವಳು. (ಉದಾಹರಣೆಗೆ: ಕೆರೆ, ಹೂದೋಟ, ಅರವಟ್ಟಿಗೆ, ಬಾವಿ, ವಿವಾಹ, ಮುಂತಾದ ಧರ್ಮಗಳ ಕಟ್ಟಹೆವೆಂದು 'ನೇಮ'ದಿಂದ ತಿರುಗುವವರ ಶೀಲ ಆದಾರಿಗೆ ಯೋಗ್ಯ ಎಂದು ಒಂದಡೆ ಹೇಳಿದರೆ; ಖಂಡಿತ ವ್ರತ, ಅಖಂಡಿತ ವ್ರತ, ಸಂದವ್ರತ, ಸಲ್ಲದ ವ್ರತವೆಂದು 'ನೇಮ'ವ ಮಾಡಿಕೊಂಡು ಊರೂರು ತಿರುಗಿ ಸಾರುತ್ತ ಬರುವವರನ್ನು 'ತಾ ಮಾಡಿಕೊಂಡ ವ್ರತನೇಮ ಊರೆಲ್ಲಕ್ಕೊ ತನಗೊ' ಎಂದು ಮತ್ತೊಂದೆಡೆ ಕೇಳಿರುವಳು; ಚಾಟ ಗುಂಡು, ಬಂಧನ, ಕಲಕೇತ, ಯಾಚಕ, ಪಗುಡಿ, ಪರಿಹಸಕಗಳಿಂದ ಬೇಡಿತಂದು ಗುರುಲಿಂಗ ಜಂಗಮಕ್ಕೆ ಮಾಡುವ ನೇಮಸ್ಥರನ್ನು ನೋಡಿ, ಅವಳು, ಬೇಡಿ ಕಾಡಿ ಭಕ್ತಿಯ ಮಾಡಬಹುದೆ ? ಎಂದು ಇನ್ನೊಂದೆಡೆಯಲ್ಲಿ ಪ್ರಶ್ನಿಸಿರುವಳು.)

ತಲೆ ಜಡೆಗಟ್ಟಿದವರೆಲ್ಲಾ ಹೊಲೆಯರ ಸುತರು
ಆವ ಪ್ರಕಾರವಾದಡೇನು, ಅಱಿವೇ ಮುಖ್ಯವಯ್ಯಾ'
(ಸಪುವ ೩ ಪು. ೧)

ಎಂದು ತನ್ನ ನಿಲುಮೆಯನ್ನು ವ್ಯಕ್ತಪಡಿಸಿರುವಳು. 'ವೇಷವೆಲ್ಲರದು ಸೂಳೆಯಲ್ಲಿ, ಡೊಂಬನಲ್ಲಿ ಬಹುರೂಪಿಯಲ್ಲಿರದೆ ?' ಎಂದು ಕೇಳುವ ಅಕ್ಕಮ್ಮ 'ವೇಷವ ತೋಱಿ ಒಡಲ ಹೊಱೆವ ದಾಸಿ ವೇಶಿಯ ಮಕ್ಕಳಿಗೆ ನಿಜಭಕ್ತಿ ಎಲ್ಲಿಯದು ?' ಎಂದು ತೀಕ್ಷ್ಣವಾಗಿ ನುಡಿದಿರುವಳು. ಬಿಡಾರ, ಬಿಡಾರ ಎಂದು ಹಿರಿಯತನಕ್ಕೆ ಅಹಂಕರಿಸುವ ಗಡ್ಡದ ಹಿರಿಯರು ಅನಾಚಾರಿಗಳಾಗಿ ಭಕ್ತರೊಡನೆ ಕ್ರೋಧ, ಭ್ರಷ್ಟರೊಡನೆ ಸಂಬಂಧ ಬೆಳೆಸುವುದನ್ನು ಕಂಡು ಕೆರಳಿದ ಅಕ್ಕಮ್ಮ ಇವರು ನರಕಕ್ಕೆ ಯೋಗ್ಯರು ಎಂದು ಕನಲಿ ನುಡಿದಿರುವಳು (ಸಪುವ ೩ ಪು. ೧).

ತಾವು ಜ್ಞಾನಿಗಳೆಂದು ಹೇಳಿಕೊಂಡು ತಿರುಗುವ ವೇಷಧಾರಿಗಳನ್ನು ಅಮುಗೆ ರಾಯಮ್ಮನಷ್ಟು ಕಠಿಣವಾಗಿ, ಬೇರಾವ ವಚನಕಾರ್ತಿಯೂ ಟೀಕಿಸಿಲ್ಲ. ಹಲವಂದದ ವೇಷಧಾರಿಗಳನ್ನು, ಕಪಟಿಗಳನ್ನು, ಅಜ್ಞಾನಿಗಳನ್ನು ಅವಳು ಕಂಡಿರುವಳು. ಕಪಟಿ, ವೇಷಧಾರಿಗಳ ಪಾಲಿಗೆ ಅವಳ ಮಾತು ಕೂರ್ಮೊನೆ! ಮೋಸ ವಂಚನೆಗಳಿಗೆ ಸಿಡಿದೇಳುವ ವಿಶಿಷ್ಟ ವ್ಯಕ್ತಿತ್ವ ಅವಳದು. ಹಿಡಿದ ಛಲವನ್ನು ಪೂರೈಸುವವರ ಬಗೆಗೆ ಹೆಚ್ಚಿನ ಗೌರವಾದರಗಳನ್ನು ಆಕೆ ಹೊಂದಿದ್ದಳು. 'ಹಿಡಿದ ಛಲವ ನಡೆಸುವರ ಕಂಡಡೆ ಎನ್ನ ಕರ್ತು ಬಾರೆಂಬರಯ್ಯಾ, ವ್ಯುಡನ ಶರಣರು' : 'ಹೆದರದಿರು ಮನವೆ, ಹಿಮ್ಮೆಟ್ಟದಿರು ಮನವೆ, ಹಿಡಿದ ಛಲವ ಬಿಡದಿರು ಮನವೆ, ಜರಿದರೆಂದು, ಝಂಕಿಸಿದರೆಂದು ಶಸ್ತ್ರ, ಸಮಾಧಿ, ನೀರು; ನೇಣು, ವಿಷ, ಔಷಧದಲ್ಲಿ ಘಟವ ಬಿಡದೆ' ; 'ಹಿಡಿದ ಛಲವ ಬಿಡದೆ ನಡೆಸಿ ವ್ಯುಡನ ಪಡೆದಿಹೆನೆಂಬ ಭಾಷೆ ಎನಗೆ, ಕಡುಗಲಿಯಾಗಿ ಆಚರಿಸಿ ಜಡಿದೆನು, ಅಜ್ಞಾನಿಗಳ ಬಾಯ ಕೆಱಹಿನಲ್ಲಿ'–ಎಂಬ ಅವಳ ಹೇಳಿಕೆಗಳೇ ಛಲಕ್ಕೆ ಹೆಚ್ಚಿನ ಪ್ರಾಶಸ್ತ್ಯ ನೀಡುವ ಅವಳ ವ್ಯಕ್ತಿತ್ವವನ್ನು ಪರಿಚಯಿಸುತ್ತದೆ. ಅಜ್ಞಾನಿಗಳ ಬಾಯ ಕೆಱಹಿನಲ್ಲಿ' ಜಡಿಯುವೆನೆನ್ನುವ ಅವಳ ಮಾತಿನಲ್ಲಿ ಯಥಾರ್ಥತೆ ಇದೆ. ಅವಳು ತನ್ನ ಎಷ್ಟೋ ವಚನಗಳಲ್ಲಿ ಈ ಮಾತಿಗೆ ತಪ್ಪದೆ ನಡೆದಿರುವಳು. ಅಂತರಂಗ ಶುದ್ಧವಿಲ್ಲದ ಜಂಗಮರನ್ನು ಅವಳು 'ವ್ಯುಡನ ವೇಷವ ತೊಟ್ಟ ಕೂಳಿ'ಗಳೆಂದೂ. 'ಅನ್ನಕೂಳಿಕ್ಕುವರ ಮನೆಯ ಕುನ್ನಿ'ಗಳೆಂದೂ ಹೀನೈಸಿ ಕರೆದಿರುವಳು. ಮತ್ತೊಂದೆಡೆ 'ತುಪ್ಪ ಬೋನವನುಂಡು, ನಚ್ಚುಮಚ್ಚಿನ ಮಾತ ನುಡಿದು, ರಚ್ಚೆಯಲ್ಲಿ ಕುಳಿತು ಇಷ್ಟಲಿಂಗವನಪ್ಪಿದರ ನಿತ್ಯಜ್ಞಾನಿಗಳೆಂದಡೆ, ಪ್ರತ್ಯಕ್ಷವಾಗಿ ಸುರಿಯದೆ ಬಾಯಲ್ಲಿ ಬಾಲಹುಳು' ಎಂದು ಕಡೆನುಡಿಯುವಳು. ತನ್ನಕಾಲದ ವಿರಕ್ತರ ಬೂಟಾಟಿಕೆಯನ್ನು, ವಂಚನೆಯನ್ನು, ಮೋಸವನ್ನು ಎಷ್ಟುವಿಧವಾಗಿ ಟೀಕಿಸಿದರೂ ಅವಳಿಗೆ ಸಾಲದು.

ಜ್ಞಾನಿಗಳಾದ ವಿರಕ್ತರು ಸದಾ ದೇಶ ಸಂಚಾರಿಗಳಾಗಿ ವಚನಗಳ ಮೂಲಕ ಅನುಭಾವವನ್ನು ಭಕ್ತರಿಗೆ ಬೋಧಿಸುತ್ತಿದ್ದರೆಂಬ ಸಂಗತಿಯನ್ನು ರಾಯಮ್ಮ ಒಂದೆರಡು ವಚನಗಳಲ್ಲಿ ಸೂಚ್ಯವಾಗಿ ಹೇಳಿರುವಳು. ಅವಳ ಕಾಲಕ್ಕೆ ಜ್ಞಾನಿ ವಿರಕ್ತರಂತೆ, ಅಜ್ಞಾನಿ ವಿರಕ್ತರ ಸಂಖ್ಯೆಯೂ ಹೆಚ್ಚಿನ ಪ್ರಮಾಣದಲ್ಲಿದ್ದಿರಬಹುದು. ಈ ಅಜ್ಞಾನಿ-ವಿರಕ್ತರ ಬಗೆಗೆ ಅವಳ ಮಾತಿನ ಅಲಗು ಝಳಪಿಸಿದೆ. 'ದೇಶ ದೇಶವ ತಿರುಗಿ, ಮಾತುಗಳ ಕಲಿತು ಗ್ರಾಸಕ್ಕೆ ತಿರುಗುವ ಡಾಸಿವೇಸಿಯ ಮಕ್ಕಳ ವಿರಕ್ತರೆಂಬೆನೆ ?' ಎಂದು ಒಂದೆಡೆ ಕೇಳಿರುವಳು. ಬೆಟ್ಟದ ನೆಲ್ಲಿಕಾಯನ್ನು ಪಟ್ಟಣಕ್ಕೆ ಹೊತ್ತುಕೊಂಡು ಹೋಗಿ ಮಾರಿ ಹೊಟ್ಟೆ ಹೊರೆಯುವವನಂತೆ, ಉತ್ತಮ ತೇಜಿಯ ಹೆಸರ ಹೇಳಿ ಕಡಲೆಯನ್ನು ತಿನ್ನುವ ಗಾವಲಿಗನಂತೆ, ಅತ್ತೆಯ ಹೆಸರ ಹೇಳಿ ಹೊಟ್ಟೆ ಹೊರೆವ ತೊತ್ತಿನಂತೆ ಆದ್ಯರ ವಚನಗಳ ಓಲೆ ಕಟ್ಟುಗಳನ್ನು ಊರಿಂದೂರಿಗೆ ಹೊತ್ತುಕೊಂಡು ಹೋಗಿ ವಚನಗಳ ಹೇಳಿ ಅನ್ನ ಕೂಳಿಗೆ ಓಡಾಡುವ ಅಜ್ಞಾನಿಗಳನ್ನು ಅನುಭಾವಿಗಳು, ವಿರಕ್ತರು ಎಂದು ಹೇಗೆ ಹೇಳಲಿ ? ಎನ್ನುವ ಅವಳು ಅಂತಹವರನ್ನು 'ವೇಷವ ಹೊತ್ತು ತಿರುಗುವ ಡೊಂಬನಂತೆ' ಎಂದು ಮರ್ಮಾಘಾತವಾಗುವಂತೆ ನುಡಿದಿರುವಳು. 'ಕುಂಜರನ ವೇಷವ ತೊಟ್ಟು ಹಂದಿಯಂತೆ ತಿರುಗುವ ಅಜ್ಞಾನಿಗಳನೇನೆಂಬೆ' ; 'ಅನುಭಾವಿ ಅನುಭಾವಿಗಳೆಂಬ ಅಜ್ಞಾನಿಗಳ ಮುಖವ ನೋಡಲಾಗದು' ; ಅನಿತ್ಯವ ಹೊತ್ತುಕೊಂಡು ತಿರುಗುವ ಅಘೋರಿಗಳ ಕಂಡಡೆ ಮಾಗಿಯ ಕೋಗಿಲೆಯಂತೆ ಮೋಟೆಯ ತೋಟೆನು ?; 'ಕಾವಿಯ ಹೊದ್ದು ತಿರುಗುವ ಜೀವಗಳ್ಳರು ವಿರಕ್ತರೆ ? ನಾಮವ ಹೊತ್ತುಕೊಂಡು ತಿರುಗುವ ಗಾವಿಲರ ವಿರಕ್ತರೆಂದಡೆ ಅಘೋರ ನರಕ ತಪ್ಪದು' : 'ಕರ್ತುವಿನಂತೆ ವೇಷವ ತೊಟ್ಟು ಕತ್ತೆಯಂತೆ ತಿರುಗುವ ಕಳ್ಳರನೊಲ್ಲ ಅಮುಗೇಶ್ವರ ಲಿಂಗವು' ; 'ಮಂಡೆಯ ಬೋಳಿಸಿಕೊಂಡು ಈಶನ ವೇಷವ ತೊಟ್ಟು ಗ್ರಾಸಕ್ಕೆ ತಿರುಗುವ ವೇಷಧಾರಿಗಳ ಲಿಂಗೈಕ್ಯರೆಂದಡೆ ಅಘೋರ ನರಕ ತಪ್ಪದು ಕಾಣಾ'; 'ಗುರುವಿನಲ್ಲಿ ಉಪದೇಶವ ಪಡೆದವರೆಲ್ಲರೂ ವಿರಕ್ತರಾಗಬಲ್ಲರೆ ? ಭೂಮಿಯ ಮೇಲಣ ಕಾವಿಯ ಹೊದ್ದು ಕಾಯವಿಕಾರಕ್ಕೆ ತಿರುಗುವ ಗಾವಿಲರ ಲಾಂಛನಿಗಳೆಂದಡೆ ಅಮುಗೇಶ್ವರ ಲಿಂಗವು ನೋಡಿ ನೋಡಿ ನಗುತಿಪ್ಪದು'; 'ಮಂಡೆಯ ಬೋಳಿಸಿಕೊಂಡು ತುಂಡುಗಂಬಳಿಯ ಹೊದ್ದವರ ಕಂಡಡೆ ನಂಬಲಾಜೆ, ನೆಚ್ಚಲಾಜೆ. ಈ ವೇಷವ ಕಂಡು ನಾಚಿದೆ'–ಹೀಗೆ ಅವಳ ಮಾತಿನ ಚಾಟಿಯೇಟು ವೇಷಧಾರಿ ವಿರಕ್ತರನ್ನು ಘಾಸಿಗೊಳಿಸುತ್ತದೆ. ತಮ್ಮನ್ನು ಜ್ಞಾನಿಗಳೆಂದು ಕರೆದುಕೊಳ್ಳುವವರನ್ನು ನೋಡಿ ರಾಯಮ್ಮ 'ಜ್ಞಾನವೆಂಬುದು ಬೀದಿಯ ಪಸರವೆ ? ಬೊಕ್ಕಣಕ್ಕೆ ತುಂಬುವ ಹುರುಳಿಯೆ ? ಚೀಲದೊಳಗಣ ಜೀರಿಗೆಯೆ ? ಗಾಣದೊಳಗಣ ಹಿಂಡಿಯೆ ?' ಎಂದು ವ್ಯಂಗ್ಯವಾಡುವಳು. ಅವಳ ನಂಬುಗೆಯ ಪ್ರಕಾರ ವಿರಕ್ತನಾದವನು 'ಜ್ಞಾನವೆಂಬುದ ಎಲ್ಲರೊಡನೆ ಬೀಱದಿರಬೇಕು. ಗೆಲ್ಲು ಸೋಲಿನ ಮಾತು ಬಂದಡೆ ಗೆಲ್ಲವ

ನುಡಿಯದಿರಬೇಕು' ಇಂತಹವರನ್ನು ತಾನು ಈಶ್ವರನೆಂದು, ಲಿಂಗವೆಂದು ಭಕ್ತಿ ಭಾವದಿಂದ ಪೂಜಿಸುವುದಾಗಿ ಅವಳು ಹೇಳುವಳು.

ಒಡೆಯ–ಸೇವಕ ಎಂಬ ಭೇದಭಾವ ಜಂಗಮ ಭಕ್ತರಲ್ಲಿ ತಲೆಹಾಕಬಾರದು. ಆಗಿನ ಸಮಾಜದಲ್ಲಿಯೂ ಈ ಭೇದಭಾವ ತಾಂಡವವಾಡುತ್ತಿದ್ದಿರಬೇಕು. ಉರಿಲಿಂಗ ಪೆದ್ದಿಗಳ ಪತ್ನಿ ಕಾಳವ್ವೆ ಇಂತಹದನ್ನು ತೀವ್ರವಾಗಿ ಆಕ್ಷೇಪಿಸುತ್ತಾ 'ಒಡೆಯರೆಂಬ ತುಡುಗುಣಿಗಳು ತಾವು ಪೂಜೆಗೊಂಬಲ್ಲಿ ಅವರ ಮನೆಗೆ ಹೂವು, ಹಣ್ಣು, ಕಾಯಿ ಪತ್ರೆಗಳ ತಹ ಹೋಗುವ ಬರುವ ಊಳಿಗವ ಕೊಂಬಾತ ಭಕ್ತನಲ್ಲ. ಅಲ್ಲಿ ಪೂಜೆ ಗೊಂಬಾತ ಜಂಗಮನಲ್ಲ. ಇವರಿಬ್ಬರೂ ನಾಯಕ ನರಕಕ್ಕೆ ಯೋಗ್ಯರಯ್ಯ' ಎಂದಿರು ವಳು (ಸಪುವ ೩ ಪು. ೨೫). (ಹುಟ್ಟಿನಲ್ಲಿ ಅಂತ್ಯಜನಾಗಿ, ಆಚರಣೆಯಲ್ಲಿ ಪರಮ ಜ್ಞಾನಿಯಾಗಿ ಮುಂದೆ ಪ್ರಸಿದ್ಧ ವೀರಶೈವ ಮತದ ಉತ್ತರಾಧಿಕಾರಿಯಾದ ಉರಿಲಿಂಗ ಪೆದ್ದಿಯ ಪತ್ನಿಯ ಮೇಲಣ ಮಾತು ಅರ್ಥಪೂರ್ಣವಾಗಿದೆ.) ಹಣಕ್ಕಾಗಿ ಯಾರಿ ಗಾದರೂ ಎಂತಹವರಿಗಾದರೂ ಲಿಂಗವನ್ನು ಅನುಗ್ರಹಿಸುವ ಜಂಗಮರನ್ನು ಕಂಡು ಕಾಳವ್ವೆ 'ಅಯ್ಯಾ, ಸೂಳೆಗೆ ಹುಟ್ಟಿದ ಮಕ್ಕಳಿಗೆ ಕೊಟ್ಟವರೊಳು ಸಮ್ಮೇಳ ಕೊಡದವರೊಳು ಕ್ರೋಧ ; ವ್ರತಹೀನರೊಳು ಮೇಳ, ವ್ರತನಾಯಕರೊಳು ಅಮೇಳ, ಸುಡು ಸುಡು ಅವರ ಕೂಡಿದಡೆ ಉರಿಲಿಂಗ ಪೆದ್ದಿಗಳರಸನೊಲ್ಲನವ್ವಾ' ಎಂದು ತಿರಸ್ಕರಿಸುವಳು (ಸಪುವ ೩ ಪು. ೨೬) ಆಶಾಪಾಶಕ್ಕೆ ಬದ್ಧರಾದ ಜಂಗಮ ರನ್ನು 'ಸೂಳೆಗೆ ಹುಟ್ಟಿದ ಮಕ್ಕಳು' ಎಂದು ತೀರಾ ಹೀನಾಯವಾಗಿ, ತುಚ್ಛವಾಗಿ ಸಂಬೋಧಿಸುವುದರ ಮೂಲಕ ಕಾಳವ್ವೆ ಅವರ ಬಗೆಗಿರುವ ತನ್ನ ಮನದ ಕಿನಿಸನ್ನು, ಹೇಸಿಕೆಯನ್ನು ಧ್ವನಿಪೂರ್ಣವಾಗಿಸಿರುವಳು.

ಸಾಮಾಜಿಕ ಶೋಷಣೆಯ ಹಲವು ಮುಖಗಳ ಬಗೆಗೆ ಹಾಗೂ ಅಜ್ಞಾನದ ಬಗೆಗೆ ಕೆಳವರ್ಗದವರಷ್ಟೇ ವಿಚಾರಮಾಡಿದರು, ಪ್ರತಿಭಟನೆಯನ್ನು ವ್ಯಕ್ತಪಡಿಸಿದರು, ಟೀಕಿಸಿದರು ಎಂದರೆ ತಪ್ಪಾಗುತ್ತದೆ. ಕೆಳವರ್ಗದ ವಚನಕಾರರಷ್ಟೇ ಉಗ್ರವಾಗಿ ಮೇಲುವರ್ಗಕ್ಕೆ ಸೇರಿದ ಬಸವಣ್ಣ, ಚನ್ನಬಸವಣ್ಣ, ಸಿದ್ಧರಾಮ ಮೊದಲಾದ ವಚನ ಕಾರರು ತಮ್ಮ ಪ್ರತಿಕ್ರಿಯೆಯನ್ನು ವ್ಯಕ್ತಪಡಿಸಿರುವರು. ಇದು ಸಾಧಾರಣ ಸಂಗ ತಿಯಲ್ಲ. ಉಚ್ಚ ವರ್ಣೀಯರ ಉಗ್ರವಾದ ಕೋಪ–ತಾಪಗಳಿಗೆ ಇದು ಮಾಟು ಗೋಲು ; ಕ್ರಾಂತಿಕಹಳೆ. ಉಚ್ಚವರ್ಣೀಯರಲ್ಲೇ ಮಾನವೀಯತೆಯುಳ್ಳ,ವೈಚಾರಿಕ ಪ್ರಜ್ಞೆಯುಳ್ಳ ಕೆಲವರ ಪ್ರೇರಣೆಯಿಂದಾಗಿ ಕೆಳವರ್ಗದವರ ಬಾಳಿನಲ್ಲಿ ಚೈತನ್ಯ ತುಂಬಿತು ; ಅವರ ದನಿಗೆ ಬಲ ಬಂದಿತು ; ತಮ್ಮ ಬದುಕನ್ನು ನಡೆಸುವವರು ತಾವೇ ಹೊರತಾಗಿ ಅನ್ಯರಲ್ಲ ಎಂಬ ಆತ್ಮವಿಶ್ವಾಸ ಕುದುರಿತು ; ತಾವೂ ಚಾರಿತ್ರ ಶುದ್ಧಿ ಯಿಂದ ಬಾಳಬೇಕು, ಇತರರನ್ನೂ ಹಾಗೆಯೇ ಬಾಳಬಿಡಬೇಕು ಎನ್ನುವ ಆದರ್ಶ ಕುಡಿಯೊಡೆಯಿತು. ಹೊಸ ಬದುಕಿಗೆ ಮುಖಕೊಟ್ಟು ಧೈರ್ಯದಿಂದ ಅವರು

ಮುನ್ನಡೆದಾಗ, ತಮ್ಮ ಸುತ್ತಣ ಪರಿಸರದಲ್ಲಿ ಒಳಿತನ್ನು ಕಂಡಂತೆ ಅವರು ಕೆಡುಕನ್ನೂ ನೋಡಿದರು. ಸಾಮಾಜಿಕ ನೆಮ್ಮದಿಗೆ ಭಂಗ ತರುವ ಎಲ್ಲವನ್ನೂ ಅವರು ಧೈರ್ಯ ದಿಂದ ಟೀಕಿಸಿದರು, ಪ್ರತಿಭಟಿಸಿದರು. ಹನ್ನೆರಡನೆಯ ಶತಮಾನದ ವೈಚಾರಿಕ ಕ್ರಾಂತಿಗೆ ಇವರ ಕೊಡುಗೆ, ಎಷ್ಟು ಮಹತ್ವದ್ದೆಂಬುದು ಇದರಿಂದ ವಿದಿತವಾಗುತ್ತದೆ. ಹಾಗೆಯೇ, ಹನ್ನೆರಡನೆಯ ಶತಮಾನದ ಸಾಮಾಜಿಕ ಅಧ್ಯಯನಕ್ಕೂ ಇವರ ವಚನಗ ಳಿಂದ ಹೆಚ್ಚಿನ ನೆರವು ಸಿಗುತ್ತದೆಂಬ ಮಾತು ಇಲ್ಲಿ ಅಷ್ಟೇ ಮಹತ್ವದ್ದಾಗಿದೆ.

ಕೆಳವರ್ಗದ ಎಲ್ಲ ವಚನಕಾರರೂ ಬಂಡಾಯದ ಧೋರಣೆಯನ್ನು ತಮ್ಮ ವಚನ ಗಳಲ್ಲಿ ಪ್ರಕಟಿಸಿಲ್ಲ. ಅವರವರ ಆಸಕ್ತಿ – ಅನುರಕ್ತಿಯನ್ನು ಅವಲಂಬಿಸಿ ವಚನಗಳು ಜೀವಧಾರಣೆ ಹೊಂದಿವೆ. ಕೆಳವರ್ಗದ ವಚನಕಾರರಲ್ಲಿ ಕೆಲವರಿಗೆ ಹೇಳಬೇಕೆನಿಸಿ ದ್ದನ್ನು ನೇರವಾಗಿ, ಸರಳವಾಗಿ ಹೇಳುವುದರಲ್ಲಿ ಆಸಕ್ತಿ ; ಮತ್ತೆ ಕೆಲವರಿಗೆ, ಆಧ್ಯಾ ತ್ಮಿಕ ಅನುಭವಗಳ ನಿರೂಪಣೆಯಲ್ಲಷ್ಟೇ ತೃಪ್ತಿ ; ಇನ್ನು ಕೆಲವರಿಗೆ, ಬೆಡಗಿನ ವಚನ ಗಳಲ್ಲಿ ತತ್ತ್ವ ವಿಚಾರಗಳನ್ನು ಹೇಳುವ ತವಕ. ಅಂಬಿಗರ ಚೌಡಯ್ಯ, ಮಡಿವಾಳ ಮಾಚಿದೇವ, ಅಮುಗೆ ರಾಯಮ್ಮ–ಇವರಂತಹವರಿಗೆ ಸಾಮಾಜಿಕ ಶೋಷಣೆಯ ಬಗೆಗೆ ಅತ್ಯಂತ ಕಳಕಳಿ. ಅನ್ಯಾಯ, ಶೋಷಣೆ, ವಂಚನೆ, ಡಾಂಭಿಕತನ, ದುರಾ ಚಾರಗಳನ್ನು ಕಂಡಾಗ ಇವರು ಸಹಜವಾಗಿ ಕೆರಳುವರು. ಆಗ ಇವರ ಮಾತಿಗೆ ಚುಚ್ಚುವ, ಘಾಸಿಮಾಡುವ, ಬಡಿದೆಬ್ಬಿಸುವ ಶಕ್ತಿ ಬರುತ್ತದೆ. ಕೆಳವರ್ಗದವರಲ್ಲಿ ಇವರಷ್ಟು ಉಗ್ರವಾಗಿ ಸಾಮಾಜಿಕ ಪ್ರತಿಭಟನೆ ಮಾಡಿದವರು ಮತ್ತೊಬ್ಬರಿಲ್ಲ.

## ಆಧಾರ ಗ್ರಂಥಗಳು


1. ಸಕಲಪುರಾತನರ ವಚನಗಳು ೧ ಸಂ. ಡಾ॥ ಆರ್. ಸಿ. ಹಿರೇಮಠ ಪ್ರ : ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ [೧೯೭೨]
2. ಸಕಲ ಪುರಾತನರ ವಚನಗಳು ೨ ಸಂ. ಡಾ॥ ಎಂ. ಎಸ್. ಸುಂಕಾಪುರ ಪ್ರ : ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ [೧೯೭೬]
3. ಸಕಲ ಪುರಾತನರ ವಚನಗಳು ೩ ಸಂ. ಡಾ॥ ಎಂ. ಎಸ್. ಸುಂಕಾಪುರ ಪ್ರ : ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ [೧೯೭೮]
4. ಅಂಬಿಗರ ಚೌಡಯ್ಯನ ವಚನಗಳು ಸಂ. ಬಸವರಾಜ ಸಿದ್ಧಾಶ್ರಮ, ಡಾ॥ ಎಸ್. ವಿದ್ಯಾಶಂಕರ ಪ್ರ : ಸ್ನೇಹ ಪ್ರಕಾಶನ, ಬೆಂಗಳೂರು ೫೬ [೧೯೮೦]
5. ಮಡಿವಾಳಯ್ಯನ ವಚನಗಳು ಸಂ/ಪ್ರ ಎಸ್. ಉಮಾಪತಿ, ಡಿ. ಆರ್. ಎಂ. ಕಾಲೇಜು, ದಾವಣಗೆರೆ [೧೯೭೩]

6. ಏಕೋತ್ತರ ಶತಸ್ಥಲ ಸಂ॥ ಸಂ. ಶಿ. ಭೂಸನೂರಮಠ ಪ್ರ : ಶ್ರೀ ನಿ. ಪ್ರ. ಸ್ವ. ಶಿವಬಸವ ಮಹಾಸ್ವಾಮಿಗಳು, ರುದ್ರಾಕ್ಷಿಮಠ, ನಾಗನೂರು [೧೯೭೪]

7. ಉರಿಲಿಂಗಪೆದ್ದಿಯ ವಚನಗಳು ಸಂ॥ ಎಚ್. ಪಿ. ಮಲ್ಲೇದೇವರು ಪ್ರ : ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ [೧೯೭೩]

8. ಶಿವಶರಣೆಯರ ವಚನಗಳು [ಸಮಗ್ರ ಸಂಪುಟ] ಸಂ. ಡಾ॥ ಆರ್. ಸಿ. ಹಿರೇಮಠ, ಪ್ರ : ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ [೧೯೬೮].



# ಪರಿವರ್ತನೆಯ ತಿರುವಿನಲ್ಲಿ ವಚನಕಾರ ಉರಿಲಿಂಗಪೆದ್ದಿ

ಹನ್ನೆರಡನೆ ಶತಮಾನದ ಬಸವಾದಿ ಪ್ರಮಥರು ನಡೆಸಿದ ಸಾಮಾಜಿಕ ಕ್ರಾಂತಿಯು ಪ್ರಧಾನಗುರಿ ಶೋಷಿತ ವರ್ಗದ ಉದ್ಧಾರವಾಗಿದ್ದಿತು. ಜಾತಿ ವರ್ಗಗಳ ಕೃತಕ ಸಂಕೋಲೆಯನ್ನು ಕಳಚಿ ಸಮಾಜದಲ್ಲಿ ಎಲ್ಲರಿಗೂ ಕೂಡಿಬಾಳುವ ಸಮಾನ ಹಕ್ಕಿದೆ ಯೆಂಬ ಘೋಷಣೆ ಮಾಡಿದವರು ಬಸವಾದಿ ಶರಣರು. ಮಠಗಳು ವರ್ಣವ್ಯವಸ್ಥೆಯ ನೆರಳಿನಲ್ಲಿ ಜಾತಿ ವರ್ಗಗಳನ್ನು ಪೋಷಿಸುತ್ತಿದ್ದಾಗ, ಈ ಸಾಮಾಜಿಕ ಅನ್ಯಾಯವನ್ನು ತಪ್ಪಿಸಲು ಸತ್ಯ, ಸದಾಚಾರ, ಸತ್‌ಶೀಲ ಸಂಪನ್ನನಾದ ಅಸ್ಪೃಶ್ಯನೊಬ್ಬನನ್ನು ಮಠದ ಉತ್ತರಾಧಿಕಾರಿಯನ್ನಾಗಿ ನೇಮಿಸಿದುದು ಹನ್ನೆರಡನೆಯ ಶತಮಾನದ ಧಾರ್ಮಿಕ ಇತಿಹಾಸದಲ್ಲಿ ಒಂದು ಅಪೂರ್ವ ದಾಖಲೆಯಾಗಿದೆ.

ಉರಿಲಿಂಗದೇವ ಈಗಿನ ಮಹಾರಾಷ್ಟ್ರದ[1] ನಾಂದೇಡ್ ಜಿಲ್ಲೆಯ ಅವಸೆ ಕಂಧಾರ ವೆಂಬಲ್ಲಿಯ ನಲ್ಲೂರಿಮಠದ ಮಠಾಧಿಪತಿಯಾಗಿದ್ದು ಸತಿಪತಿ ಭಾವದ ಸಾಧಕನಾಗಿ

---

1. ಕಂಧಾರವು ಹೈದರಾಬಾದು ಸಂಸ್ಥಾನದ ನಾಂದೇಡ್ ಜಿಲ್ಲೆಗೆ ಸೇರಿದ್ದೆಂಬ ಒಂದು ಅಭಿಪ್ರಾಯವೂ ಇದೆ. (ನೋಡಿ : ಶ. ಸು. ಶಾಮರಾಯ : ಶಿವಶರಣ ಕಥಾರತ್ನಕೋಶ, ಪು. ೪೪) "ಕಂಧಾರವು ಮಹಾರಾಷ್ಟ್ರದಲ್ಲಿದೆ. 'ಘೇ ಜಾ ದಗಡಿ ಜಾ' ಮರಾಠಿ ಪದ. ಆದ್ದರಿಂದ ಉರಿಲಿಂಗದೇವನು ತೆಲುಗು ದೇಶದಲ್ಲಿ ಹುಟ್ಟಿ ಇಲ್ಲಿ ನೆಲಸಿರಬಹುದೆ? ಅಥವಾ ಮರಾಠಾ ಪ್ರಾಂತದಲ್ಲಿ ವಾಸ ಮಾಡುತ್ತಿದ್ದ ತೆಲುಗು ವಂಶಕ್ಕೆ ಸೇರಿರಬಹುದೆ?" ಎಂಬ ತಮ್ಮ ಸಂದೇಹವನ್ನು ಶ. ಸು. ಶಾಮರಾಯರು ವ್ಯಕ್ತಪಡಿಸಿರುವರು. (ನೋಡಿ : ಶಿವಶರಣ ಕಥಾರತ್ನಕೋಶ, ಪು. ೪೫ರ ಅಡಿಟಿಪ್ಪಣಿ)

6. ಏಕೋತ್ತರ ಶತಸ್ಥಲ ಸಂ॥ ಸಂ. ಶಿ. ಭೂಸನೂರಮಠ ಪ್ರ : ಶ್ರೀ ನಿ. ಪ್ರ. ಸ್ವ. ಶಿವಬಸವ ಮಹಾಸ್ವಾಮಿಗಳು, ರುದ್ರಾಕ್ಷಿಮಠ, ನಾಗನೂರು [೧೯೭೪]

7. ಉರಿಲಿಂಗಪೆದ್ದಿಯ ವಚನಗಳು ಸಂ॥ ಎಚ್. ಪಿ. ಮಲ್ಲೇದೇವರು ಪ್ರ : ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ [೧೯೭೫]

8. ಶಿವಶರಣೆಯರ ವಚನಗಳು [ಸಮಗ್ರ ಸಂಪುಟ] ಸಂ. ಡಾ॥ ಆರ್. ಸಿ. ಹಿರೇಮಠ, ಪ್ರ : ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ [೧೯೬೮].



# ಪರಿವರ್ತನೆಯ ತಿರುವಿನಲ್ಲಿ ವಚನಕಾರ ಉರಿಲಿಂಗಪೆದ್ದಿ

ಹನ್ನೆರಡನೆ ಶತಮಾನದ ಬಸವಾದಿ ಪ್ರಮಥರು ನಡೆಸಿದ ಸಾಮಾಜಿಕ ಕ್ರಾಂತಿಯು ಪ್ರಧಾನಗುರಿ ಶೋಷಿತ ವರ್ಗದ ಉದ್ಧಾರವಾಗಿದ್ದಿತು. ಜಾತಿ ವರ್ಗಗಳ ಕೃತಕ ಸಂಕೋಲೆಯನ್ನು ಕಳಚಿ ಸಮಾಜದಲ್ಲಿ ಎಲ್ಲರಿಗೂ ಕೂಡಿಬಾಳುವ ಸಮಾನ ಹಕ್ಕಿದೆ ಯೆಂಬ ಘೋಷಣೆ ಮಾಡಿದವರು ಬಸವಾದಿ ಶರಣರು. ಮಠಗಳು ವರ್ಣವ್ಯವಸ್ಥೆಯ ನೆರಳಿನಲ್ಲಿ ಜಾತಿ ವರ್ಗಗಳನ್ನು ಪೋಷಿಸುತ್ತಿದ್ದಾಗ, ಈ ಸಾಮಾಜಿಕ ಅನ್ಯಾಯವನ್ನು ತಪ್ಪಿಸಲು ಸತ್ಯ, ಸದಾಚಾರ, ಸತ್‌ಶೀಲ ಸಂಪನ್ನನಾದ ಅಸ್ಪೃಶ್ಯನೊಬ್ಬನನ್ನು ಮಠದ ಉತ್ತರಾಧಿಕಾರಿಯನ್ನಾಗಿ ನೇಮಿಸಿದುದು ಹನ್ನೆರಡನೆಯ ಶತಮಾನದ ಧಾರ್ಮಿಕ ಇತಿಹಾಸದಲ್ಲಿ ಒಂದು ಅಪೂರ್ವ ದಾಖಲೆಯಾಗಿದೆ.

ಉರಿಲಿಂಗದೇವ ಈಗಿನ ಮಹಾರಾಷ್ಟ್ರದ[1] ನಾಂದೇಡ್ ಜಿಲ್ಲೆಯ ಆವಸೆ ಕಂಧಾರ ವೆಂಬಲ್ಲಿಯ ನಲ್ಲೂರಿಮಠದ ಮಠಾಧಿಪತಿಯಾಗಿದ್ದು ಸತಿಪತಿ ಭಾವದ ಸಾಧಕನಾಗಿ

---

1. ಕಂಧಾರವು ಹೈದರಾಬಾದು ಸಂಸ್ಥಾನದ ನಾಂದೇಡ್ ಜಿಲ್ಲೆಗೆ ಸೇರಿದ್ದೆಂಬ ಒಂದು ಅಭಿಪ್ರಾಯವೂ ಇದೆ. (ನೋಡಿ : ತ. ಸು. ಶಾಮರಾಯ : ಶಿವಶರಣ ಕಥಾರತ್ನಕೋಶ, ಪು. ೪೪) "ಕಂಧಾರವು ಮಹಾರಾಷ್ಟ್ರದಲ್ಲಿದೆ. 'ಫೇ ಜಾ ದಗಡಿ ಜಾ' ಮರಾಠಿ ಪದ. ಆದ್ದರಿಂದ ಉರಿಲಿಂಗದೇವನು ತೆಲುಗು ದೇಶದಲ್ಲಿ ಹುಟ್ಟಿ ಇಲ್ಲಿ ನೆಲಸಿರಬಹುದೆ ? ಅಥವಾ ಮರಾಠಾ ಪ್ರಾಂತದಲ್ಲಿ ವಾಸ ಮಾಡುತ್ತಿದ್ದ ತೆಲುಗು ವಂಶಕ್ಕೆ ಸೇರಿರಬಹುದೆ?" ಎಂಬ ತಮ್ಮ ಸಂದೇಹವನ್ನು ತ. ಸು. ಶಾಮರಾಯರು ವ್ಯಕ್ತಪಡಿಸಿರುವರು. (ನೋಡಿ : ಶಿವಶರಣ ಕಥಾರತ್ನಕೋಶ, ಪು. ೪೫ರ ಅಡಿಟಿಪ್ಪಣಿ)

ದ್ದನು.2 ವಚನ ಸಾಹಿತ್ಯದಲ್ಲಿ ಶರಣಸತಿ ಲಿಂಗಪತಿಭಾವದ ವಚನಗಳನ್ನು ಬರೆದವರಲ್ಲಿ ಅಗ್ರಗಣ್ಯನಾದ ಉರಿಲಿಂಗದೇವ, ತನ್ನ ಈ ಬಗೆಯ ವಚನಗಳಿಂದಾಗಿ ಶ್ರೇಷ್ಠ ಅನುಭಾವಿಗಳಲ್ಲಿ ಒಬ್ಬನಾಗಿರುವನು. ಇವನ ಶಿಷ್ಯನೇ ಪ್ರಸ್ತುತ ಉರಿಲಿಂಗಪೆದ್ದಿ. ಈ ಗುರುಶಿಷ್ಯರ ಉಲ್ಲೇಖ ಮಲ್ಲಿಕಾರ್ಜುನ ಪಂಡಿತಾರಾಧ್ಯ (ಕ್ರಿ.ಶ. ೧೧೬೦)ಹಾಗೂ ಪಾಲ್ಕುರಿಕೆ ಸೋಮನಾಥ (ಕ್ರಿ. ಶ. ೧೧೯೫) ಇವರ 'ಗಣಸಹಸ್ರನಾಮಾವಳಿ'ಯಲ್ಲಿ ಬರುವ ಅಮರಗಣಗಣಗಳ ಪಟ್ಟಿಯಲ್ಲಿ ಬಂದಿದೆ. ಮಹಾಲಿಂಗದೇವರು (ಸು. ೧೪೨೫) ತಮ್ಮ ಏಕೋತ್ತರ ಶತಸ್ಥಲದಲ್ಲಿ ತಮ್ಮ ಗುರುಕುಲದ ಅನ್ವಯವನ್ನು ಹೇಳಿರುವರು.3 ಅಲ್ಲಿ ಇಪ್ಪತ್ತೊಂದು ಮಂದಿ ಗುರುಗಳ ವಿವರ ಸಿಗುತ್ತದೆ. ಈ ಗುರು ಪರಂಪರೆಯಲ್ಲಿ ನಾಲ್ಕನೆಯ ಹಾಗೂ ಐದನೆಯವರು ಉರಿಲಿಂಗದೇವ ಹಾಗೂ ಉರಿಲಿಂಗ ಪೆದ್ದಿಗಳು. ಉರಿಲಿಂಗಪೆದ್ದಿ ಕಳ್ಳತನ ಮಾಡಿಕೊಂಡು4 ಜೀವನ ಸಾಗಿಸುತ್ತಿದ್ದ

---

2. ಉರಿಲಿಂಗದೇವ ಶರಣಸತಿ ಲಿಂಗಪತಿ ಭಾವದಲ್ಲಿ ಪೂಜೆಮಾಡುವವರೆಗೆ ತಾನು ಸ್ತ್ರೀ ರೂಪಾಗಿ ಲಿಂಗವು ಪುರುಷಾಕೃತಿಯಾಗಿರುತ್ತ ಅನುಸಂಧಾನ ಮಾಡುತ್ತಿದ್ದ ಸಂಗತಿ ಗುರುಪುರದ ಮಲ್ಲಯ್ಯನ (ಕ್ರಿ. ಶ. ಸು. ೧೪೮೦) ಅಸಂಖ್ಯಾತ ರಗಳೆ ; ವಿರೂಪಾಕ್ಷ ಪಂಡಿತನ ಕ್ರಿ. ಶ. (೧೫೮೫) ಚೆನ್ನಬಸವ ಪುರಾಣ (೫೭.೪೨) ; ಶಾಂತಲಿಂಗ ದೇಶಿಕನ (ಕ್ರಿ. ಶ. ೧೬೭೨) ಭೈರವೇಶ್ವರ ಕಾವ್ಯದ ಕಥಾಮಣಿ ಸೂತ್ರರತ್ನಾಕರ ಭಾಗ ೨ (ಪು. ೩೯)-ಇವೇ ಮೊದಲಾದ ಕೃತಿಗಳಿಂದ ತಿಳಿದು ಬರುತ್ತದೆ. ವಿರೂಪಾಕ್ಷ ಪಂಡಿತನು ತನ್ನ ಕೃತಿಯಲ್ಲಿ ಉರಿಲಿಂಗದೇವ ಸತಿಪತಿಭಾವದಲ್ಲಿ ಸ್ತ್ರೀ ರೂಪಾಂತು ಇರುತ್ತಿದ್ದನೆಂದು ಹೇಳುವಾಗ ಉರಿಲಿಂಗ ದೇವನಿಗೆ ಸಂಬಂಧಿಸಿದ ಇದನ್ನು ಅವನ ಶಿಷ್ಯ ಉರಿಲಿಂಗಪೆದ್ದಿಗೆ ಬಹುಶಃ ತಪ್ಪು ಗ್ರಹಿಕೆಯಿಂದ ಹೊಂದಿಸಿದಂತಿದೆ.

3. ಈ ಗುರುಪರಂಪರೆಯು ಅನ್ವಯಕ್ರಮ ಮುಂದೆ ಬರುವ ಬೊಮ್ಮರಸನ (೧೪೫೦) 'ಸೌಂದರಪುರಾಣ' ಹಾಗೂ ನೀಲಕಂಠಾಚಾರ್ಯನ (೧೫೮೫)'ಆರಾಧ್ಯ ಚಾರಿತ್ರ'ಗಳಲ್ಲಿ ಏಕಪ್ರಕಾರವಾಗಿಲ್ಲ. ಬೊಮ್ಮರಸನು ಕೊಡುವ ಗುರುಗಳ ಅನ್ವಯದಲ್ಲಿ ಮೊದಲ ಐದು ಹೋಲಿಕೆ ಪಡೆಯುತ್ತವೆ. (ಬೊಮ್ಮರಸನು ಇಲ್ಲಿ ಉರಿಲಿಂಗದೇವರ ಹೆಸರನ್ನು ಬಿಟ್ಟಿರುವನು.) ಉಳಿದವು ಭಿನ್ನವಾಗಿವೆ. ಬೊಮ್ಮರಸನು ಬಿಟ್ಟ ಉರಿಲಿಂಗದೇವರ ಹೆಸರನ್ನು ನೀಲಕಂಠಾಚಾರ್ಯನು ಸೇರಿಸಿ ಆದ ತಪ್ಪನ್ನು ಸರಿಗೊಳಿಸಿರುವನು.

4. ಅಂಬಲಿಗೆ ಚೆನ್ನಮಲ್ಲೇಶನ 'ದೀಪದ ಕಲಿಯರ ಕಾವ್ಯ' ಹಾಗೂ ಬಸವರಾಜನ 'ಉರಿಲಿಂಗಪೆದ್ದಯ್ಯ ಕಥೆ'-ಈ ಕೃತಿಗಳಲ್ಲಿ ಉರಿಲಿಂಗಪೆದ್ದಿ ಕಳ್ಳತನ ಮಾಡಿ ಜೀವಿಸುತ್ತಿದ್ದನೆಂದು ಹೇಳಿಲ್ಲ. ಅದೃಶ್ಯನ (ಸು. ೧೫೨೫) 'ಪ್ರೌಢರಾಯನ ಕಾವ್ಯ' ಹಾಗೂ ಶಾಂತಲಿಂಗ ದೇಶಿಕನ(೧೬೭೨) 'ಭೈರವೇಶ್ವರ ಕಾವ್ಯ ಕಥಾಮಣಿ ಸೂತ್ರರತ್ನಾಕರ'ಗಳಲ್ಲಿ ಕಳ್ಳತನ ಮಾಡಿ ಜೀವಿಸುತ್ತಿದ್ದ ಎಂದು ಬಂದಿದೆ.

ಅಸ್ಪೃಶ್ಯ ಕುಲದ ಗೃಹಸ್ಥ. ನಿರಕ್ಷರಿಯೂ ಮಂದಮತಿಯೂ ಆಗಿದ್ದ ಇವನ ಬದುಕಿನಲ್ಲಿ ಮಹತ್ತರ ಬದಲಾವಣೆಯಾದುದು ಉರಿಲಿಂಗದೇವರ ಕೃಪಾಶೀರ್ವಾದ ಪಡೆದ ಮೇಲೆ. ಈ ಕಥೆ ಪ್ರಚಲಿತವಿರುವಂತೆ ಬಹಳ ಕುತೂಹಲಕಾರಿಯಾಗಿದೆ.

ನಂದವಾಡ ಗ್ರಾಮದ ಸೂರಯ್ಯನೆಂಬ ಸದ್ಭಕ್ತನು ಆಚಾರ್ಯ ಉರಿಲಿಂಗದೇವರ ಉಪದೇಶ ಪಡೆಯಬೇಕೆಂಬ ಆಸೆಯಿಂದ ದೀಕ್ಷಾಮಂಟಪವನ್ನು ರಚಿಸಿ, ಗುರುಗಳನ್ನು ತನ್ನಮನೆಗೆ ಆಹ್ವಾನಿಸಿದನು. ಭಕ್ತನ ಕೋರಿಕೆಯಂತೆ ಗುರುಗಳು ಬಂದರು. ಈ ದೀಕ್ಷಾಸಮಾರಂಭಕ್ಕೆ ಭವಿಗಳು ಬರಬಾರದೆಂದು ಸೂರಯ್ಯ ತನ್ನ ಮನೆಯ ಬಾಗಿಲು ಮುಚ್ಚಿಸಿದನು. ಆ ದಿನ ಹಗಲಿನಲ್ಲಿಯೇ ಸೂರಯ್ಯನ ಮನೆಯಲ್ಲಿ ಕಳ್ಳತನ ಮಾಡಬೇಕೆಂದು ಬಂದ ಪೆದ್ದಣ್ಣ ಮನೆಯ ಬಾಗಿಲು ಮುಚ್ಚಿರುವುದನ್ನು ಕಂಡು ಮಾಳಿಗೆಯ ಮೇಲೇರಿ ಕಿಟಕಿಯಿಂದ ಮೆಲ್ಲನೆ ಒಳಗಿನ ದೃಶ್ಯ ನೋಡಿದನು. ಸಡಗರ ಸಂಭ್ರಮಗಳಿಂದ ನಡೆಯುತ್ತಿದ್ದ ಸಾಂಪ್ರದಾಯಿಕವಾದ ಲಿಂಗದೀಕ್ಷಾಕ್ರಮವನ್ನು ನೋಡ ನೋಡುತ್ತ ಪೆದ್ದಣ್ಣ ತಾನು ಬಂದ ಕೆಲಸವನ್ನೇ ಮರೆತನು. ಅವನ ಮನಸ್ಸಿನ ಮೇಲೆ ಆ ದೃಶ್ಯ ಅದ್ಭುತವಾದ ಪರಿಣಾಮ ಬೀರಿತು. ಮಾಳಿಗೆಯಿಂದ ಇಳಿದು ಬಂದ ಪೆದ್ದಣ್ಣನಲ್ಲಿ ತಾನೂ ಲಿಂಗವಂತನಾಗಬೇಕೆಂಬ ಆಸೆಯಾಯಿತು. ಅಂದಿನಿಂದ ಕಳ್ಳತನ ಮಾಡುವುದನ್ನು ಬಿಟ್ಟನು. ಗುರುಕೃಪೆಯನ್ನು ಹೇಗಾದರೂ ಪಡೆಯಬೇಕೆಂಬ ಹಂಬಲ ಅವನಲ್ಲಿ ದಿನದಿನಕ್ಕೆ ಬೆಳೆಯಿತು. ನಿತ್ಯವೂ ಉರಿಲಿಂಗದೇವರಿಗೆ ಕಾಣದಂತೆ ಮಠಕ್ಕೆ ಕಟ್ಟಿಗೆಯ ಹೊರೆಯೊಂದನ್ನು ಅವನು ಹಾಕಿ ಬರತೊಡಗಿದನು. ಒಮ್ಮೆ ಉರಿಲಿಂಗದೇವರು ಪೆದ್ದಣ್ಣನನ್ನು ಕರೆದು ನೀ ತರುವ ಕಟ್ಟಿಗೆಗೆ ಬೆಲೆ ತೆಗೆದುಕೊಳ್ಳುವುದಾದರೆ ಮಾತ್ರ ಅದನ್ನು ಒಳಗೆ ತರುವುದು, ಇಲ್ಲದಿದ್ದರೆ ತರಬೇಡ ಎಂದು ಗದರಿಸಿದರು. ನಂದವಾಡದ ಸೂರಭಕ್ತನಿಗೆ ಲಿಂಗವನ್ನು ಕೊಟ್ಟಂತೆ ನನಗೂ ಕೊಟ್ಟು ಕಾಪಾಡಿ, ಬೆಲೆಯ ನಾನೊಲ್ಲೆ ಎಂದ ಪೆದ್ದಣ್ಣ. ದೀಕ್ಷೆ ಹೇಗೆ ? ಎಂದು ಗುರುಗಳು ಕೇಳಲು ತಾನು ಸೂರಭಕ್ತನ ಮನೆಯ ಮಾಳಿಗೆಯ ಕಿಟಕಿಯಿಂದ ನೋಡಿದುದನ್ನೆಲ್ಲಾ ಪೆದ್ದಣ್ಣ ಹೇಳಿದನು. ವ್ಯಕ್ತಿಯ ಪೂರ್ವವಿವರಗಳನ್ನು ತಿಳಿಯದೆ, ಅರ್ಹನೆ ಅಲ್ಲವೆ ಎಂಬುದನ್ನು ವಿಚಾರ ಮಾಡದೆ ದೀಕ್ಷೆ ಕೊಡುವುದು ಹೇಗೆ ? ಎಂದು ವಿಚಾರಮಾಡುತ್ತ ಗುರುಗಳು ಮೌನವಾದರು. ನಿತ್ಯವೂ ಪೆದ್ದಣ್ಣ ತಪ್ಪದೆ ಕಟ್ಟಿಗೆಯ ಹೊರೆ ತಂದು ಹಾಕಿ, ಗುರುದರ್ಶನವಾದಾಗಲೆಲ್ಲಾ ಲಿಂಗವನ್ನು ಅನುಗ್ರಹಿಸುವಂತೆ ಕಾಡತೊಡಗಿದನು. ಈ ಕರೆಕರೆಯನ್ನು ನಿವಾರಿಸಿಕೊಳ್ಳದ ಹೊರತು ಈತ ತಮ್ಮನ್ನು ಬಿಡುವುದಿಲ್ಲವೆಂದು ಯೋಚಿಸಿ ಒಂದು ದಿನ ಕಲ್ಲೊಂದನ್ನು ಕೈಯಲ್ಲಿ ಹಿಡಿದು 'ಘೇ ದಗಡಿ ಜಾ' ಎಂದು ಅದನ್ನು ಬೈದುಕೊಡಲು ಪೆದ್ದಣ್ಣನು ಎರಡು ಕೈಗಳಿಂದ ಸ್ವೀಕರಿಸಿ ಮನೆಗೆ ಬಂದು ಶುದ್ಧ ಮನಸ್ಸಿನಿಂದ ಪೂಜಿಸತೊಡಗಿದನು. 'ಘೇ ದಗಡಿ ಜಾ' ಎಂಬುದು ಇವನ ನಿತ್ಯಮಂತ್ರವಾಯಿತು. ಇವನ ನಿಶ್ಚಲಭಕ್ತಿಗೆ ಕಲ್ಲು ಜ್ಯೋತಿರ್ಲಿಂಗವಾಯಿತು. ಭಾವಶುದ್ಧಿಯಿಂದ ಲಿಂಗವನ್ನು ಭಜಿಸಿ

ಗುರುಪಾದಸೇವೆಯನ್ನು ನಿತ್ಯವೂ ತಪ್ಪದೇ ಮಾಡುತ್ತಿದ್ದನು. ಹೀಗಿರುವಲ್ಲಿ ಮಳೆಯಾಗದೆ ಜನ ಕಂಗಾಲಾಗಿದ್ದರು. ಆ ಪಟ್ಟಣದ ಮಹಾರಾಜನಾದ ನಂದರಾಜನು ಕೆರೆಯನ್ನು ಪ್ರಜೆಗಳ ಕಷ್ಟ ಪರಿಹಾರಕ್ಕಾಗಿ ಅಗೆಸತೊಡಗಿದನು. ಎಷ್ಟು ಅಗೆಸಿದರೂ ಜಲ ಕಾಣಸಲಿಲ್ಲ. ಶಿಲ್ಪಿಗರನ್ನು ಕರೆಯಿಸಿ ಕೇಳಲು, ಕೆರೆಯ ಮಧ್ಯದಲ್ಲಿ ವಿಶಾಲವಾದ ಬಂಡೆಯೊಂದಿದೆ ಅದನ್ನು ತೆಗೆದರೆ ನೀರು ಬರುತ್ತದೆಂದು ಅವರು ಹೇಳಿದರು. ಘನ ಮಹಿಮರಿಂದಲ್ಲದೆ ಸಾಮಾನ್ಯರಿಂದ ಈ ಕಾರ್ಯವಾಗದೆಂದು ಬಗೆದ ರಾಜ ಉರಿಲಿಂಗ ದೇವರನ್ನು ಕರೆಯಿಸಿದ. ಅವರು ಪೆದ್ದಣ್ಣನೊಂದಿಗೆ ಅರಸನಲ್ಲಿಗೆ ಬಂದರು. ಅರಸ ತನ್ನ ಕಷ್ಟವನ್ನು ಗುರುಗಳಲ್ಲಿ ಹೇಳಿಕೊಂಡನು. ಉರಿಲಿಂಗದೇವರು ಶಿಷ್ಯನ ಮುಖ ನೋಡಿದರು. ಗುರುವಾಜ್ಞೆಯೆಂದು ಭಾವಿಸಿ ಗುರುಪಾದವನ್ನು ಹೃದಯದಲ್ಲಿ ನೆಲೆಗೊಳಿಸಿ ಇಷ್ಟಲಿಂಗವನ್ನು ತೆಗೆದು 'ಘೇ ದಗಡಿ ಜಾ' ಎಂದನು. ಸ್ವಯಂಜ್ಯೋತಿಯಾದ ಇಷ್ಟಲಿಂಗವು ಹೋಗಿ ಬಂಡೆಯಲ್ಲಿ ಕೀಲಿಸಿತು. ಪೆದ್ದಣ್ಣ ಮತ್ತೊಮ್ಮೆ ಮಂತ್ರೋಚ್ಚಾರ ಮಾಡಲು ಲಿಂಗವು ಭರದಿಂದ ಹೊರಬಂದು ಪೆದ್ದಣ್ಣನಲ್ಲಿ ಸೇರಿತು. ಕ್ಷಣಮಾತ್ರದಲ್ಲಿಯೇ ಭೂಮಿಯಿಂದ ನೀರು ಉಕ್ಕಿ ಹರಿದು ಕೆರೆಯನ್ನೆಲ್ಲಾ ತುಂಬಿತು. ಶಿಷ್ಯನ ಮಹಿಮೆಯನ್ನರಿತ ಗುರುಗಳು ಅವನಿಗೆ ಉಪದೇಶವಿತ್ತು, ತಮ್ಮ ಪೀಠವನ್ನೇರಲು ಇವನೇ ಯೋಗ್ಯನೆಂದು ಭಾವಿಸಿ ಉರಿಲಿಂಗಪೆದ್ದಿ ಎಂಬ ಹೆಸರನ್ನು ಅನುಗ್ರಹಿಸಿ ಪಟ್ಟಾಧಿಕಾರಿಯನ್ನಾಗಿಯೂ ಮಾಡಿದರು.5

---

5. ಸತ್ಕುಲಪ್ರಸೂತನೂ ಬ್ರಹ್ಮಚಾರಿಯೂ ಅಲ್ಲದ ಶ್ವಪಚನೊಬ್ಬನಿಗೆ ಲಿಂಗಧಾರಣೆ ಮಾಡಿ ಮಠದ ಗುರುಪಟ್ಟವನ್ನು ಕಟ್ಟಿದುದು ಸಂಪ್ರದಾಯಸ್ಥರ ಕೋಪವನ್ನು ಕೆರಳಿಸಿರಲೂ ಬಹುದು. ಅಂಬುಲಿಗೆ ಚೆನ್ನಮಲ್ಲೇಶ ಹಾಗೂ ಬಸವರಾಜರ ಕೃತಿಗಳಲ್ಲಿ ಕೆರೆಯ ಪವಾಡದ ನಂತರ ಉರಿಲಿಂಗದೇವರು ತಮ್ಮ ಶಿಷ್ಯನ ಮನೆಗೆ ಬಂದು ಪೂಜೆಯನ್ನು ದಂಪತಿಗಳಿಂದ ಸ್ವೀಕರಿಸಿ ಅವರಲ್ಲಿ ಊಟಮಾಡಿದ ಪ್ರಸಂಗ ಬಂದಿದೆ. ಅಂಬುಲಿಗೆ ಚೆನ್ನಮಲ್ಲೇಶನ 'ದೀಪದ ಕಲಿಯರ ಕಾವ್ಯ'ದಲ್ಲಿ ಮಾತ್ರ ಪೀಠಾಧಿಕಾರಿ ನೇಮಕದ ಸಂದರ್ಭದಲ್ಲಿ ಗದ್ದಿಗೆಗಾಗಿ ಶಿಷ್ಯರಲ್ಲಿ ಕಿತ್ತಾಟ ನಡೆದ ಉಲ್ಲೇಖ ಬರುತ್ತದೆ. ಮಹಾರಾಜ ಕಣಗಿಲರಾಯನೇ ಸ್ವತಃ ಬಂದು ಯೋಗ್ಯನನ್ನು ಪಟ್ಟಕ್ಕೆ ಆಯ್ಕೆಮಾಡಿ ಎನ್ನುವನು. ಉರಿಲಿಂಗದೇವ ಪಟ್ಟಕ್ಕೆ ಯೋಗ್ಯರಾದವರನ್ನು ಪರೀಕ್ಷಿಸಲು ಕೊಂಡವನ್ನು ಅಗೆಸಿ, ಶಿಷ್ಯರನ್ನು ಕುರಿತು ಕೊಂಡದಲ್ಲಿ ಬೀಳಲು ಹೇಳುವನು. ಹೆದರಿದ ಶಿಷ್ಯರು ಹಿಂದುಮುಂದಾಗಿ ಓಡಿಹೋದರು, ಪೆದ್ದಯ್ಯನಿಗೆ ಹೇಳಲು, ಆತ ಲಿಂಗವನ್ನು ಕರದಲ್ಲಿ ಹಿಡಿದು ಹಿಂದು ಮುಂದು ನೋಡದೆ ಕೊಂಡದಲ್ಲಿ ಬೀಳುವನು. ಶಿವ ಒಲಿದುಬಂದು ಗುರುವಾಜ್ಞೆ ಮೀರದ ಶರಣ ನೀನೆಂದು ಕೊಂಡಾಡುವನು. ಉರಿಲಿಂಗದೇವ ಹಾಗೂ ಪೆದ್ದಯ್ಯ ದಂಪತಿಗಳನ್ನು ಶಿವ ಕರಿಮುರುಗ ಮಲ್ಲಿಗೆ ಪುಷ್ಪಕದಲ್ಲಿ ಮೇರುಗಿರಿಗೆ ಕರೆದೊಯ್ಯುವನು. ಚೆನ್ನಮಲ್ಲೇಶ ಪೆದ್ದಯ್ಯನ ಗುರುಭಕ್ತಿಯನ್ನು ವಿಶೇಷಿಸಿ ಹೇಳಲು ತನ್ನ ಕಾಲದಲ್ಲಿ ಬಳಕೆಯಲ್ಲಿದ್ದ ಗುರುಭಕ್ತನ ಕಥೆಯನ್ನು ಇಲ್ಲಿ ಬಳಸಿಕೊಂಡಂತೆ ತೋರುತ್ತದೆ.

ಈ ಗುರು–ಶಿಷ್ಯರ ಉಲ್ಲೇಖ ನಮಗೆ ಮೊದಲಿಗೆ ಮಲ್ಲಿಕಾರ್ಜುನ ಪಂಡಿತಾರಾಧ್ಯ ಹಾಗೂ ಪಾಲ್ಕುರಿಕೆ ಸೋಮನಾಥರಲ್ಲಿ ಸಿಗುವುದಾದರೂ, ಇವರ ಬದುಕಿಗೆ ಸಂಬಂಧಿಸಿದ ಮೇಲಣ ಕಥೆ ನಮಗೆ ಮೊದಲು ದೊರೆಯುವುದು ಅದೃಶ್ಯಕವಿಯ (ಸು. ೧೫೨೫) ಪ್ರೌಢರಾಯನ ಕಾವ್ಯದಲ್ಲಿ. ಏಕೋ ಏನೋ, ಈ ಗುರು–ಶಿಷ್ಯರು ಅಜ್ಞಾತರಾಗಿಯೇ ಉಳಿದುಬಿಟ್ಟಿರುವರು. ಹರಿಹರ, ಭೀಮಕವಿ, ಲಕ್ಕಣ್ಣ ದಂಡೇಶ, ಗುಬ್ಬಿಯ ಮಲ್ಲಣ, ವಿರೂಪಾಕ್ಷ ಪಂಡಿತ, ಪರ್ವತದೇವ, ಮಾದಣ್ಣ, ಉತ್ತರ ದೇಶದ ಬಸವಲಿಂಗ–ಇವರ ಕೃತಿಗಳಲ್ಲಿ ಎಲ್ಲಿಯೂ ಮೇಲಣ ಕಥೆ ಉಲ್ಲೇಖಗೊಳ್ಳದಿರುವುದು ಆಶ್ಚರ್ಯ. ಕಲ್ಲನ್ನೇ ಲಿಂಗವೆಂದು ಸದ್ಭಾವದಿಂದ ಪೂಜಿಸಿ ಜ್ಯೋತಿರ್ಲಿಂಗವಾಗಿಸಿದ ಉರಿಲಿಂಗಪೆದ್ದಿಯ ಕಥೆ ನಮ್ಮ ವೀರಶೈವ ಕವಿಗಳ ಕೃತಿಗಳಲ್ಲಿ ಉಪಕಥೆಯಾಗಿಯಾದರೂ ಬರಬೇಕಿತ್ತು. 'ಶರಣಸತಿ ಲಿಂಗಪತಿ'ಯೆಂಬ ಮಧುರಭಾವದ ಮಹತ್ವದ ವಚನಗಳನ್ನು ಬರೆದ ಉರಿಲಿಂಗದೇವನಾಗಲೀ; ವೇದ, ಆಗಮ, ಉಪನಿಷತ್ತು, ಪುರಾಣಾದಿಗಳನ್ನು ಆಳವಾಗಿ ವ್ಯಾಸಂಗಮಾಡಿ ಅವನ್ನು ವೈಚಾರಿಕ ಹಿನ್ನೆಲೆಯಲ್ಲಿ ವಿಶ್ಲೇಷಿಸಿ ತತ್ತ್ವನಿಷ್ಠವಾದ, ಅನುಭವಯುಕ್ತವಾದ ವಚನಗಳನ್ನು ಬರೆದ[6] ಉರಿಲಿಂಗಪೆದ್ದಿಯಾಗಲೀ ವಚನಸಾಹಿತ್ಯದಲ್ಲಿ ಗಮನಾರ್ಹವಾದ ಸ್ಥಾನಮಾನಗಳನ್ನು ಪಡೆದಂತೆ ಕಂಡುಬರುವುದಿಲ್ಲ.

ಉರಿಲಿಂಗದೇವರು ಉತ್ತರ ಕರ್ನಾಟಕದ ಪ್ರಸಿದ್ಧ ಮಠದ ಪೀಠಾಧಿಕಾರಿಯಾಗಿ ತಮ್ಮ ಉತ್ತರಾಧಿಕಾರಿಯನ್ನು ಆಯ್ಕೆ ಮಾಡುವಾಗ ಸಂಪ್ರದಾಯವನ್ನು ಮೀರಿ ಅಸ್ಪೃಶ್ಯನೂ ಗೃಹಸ್ಥನೂ ಆದ ಉರಿಲಿಂಗಪೆದ್ದಿಯನ್ನು ಆಯ್ಕೆ ಮಾಡಿದುದು ನಮ್ಮ ಊಹೆಗೂ ಮೀರಿದ ಸಂಗತಿಯಾಗಿದೆ. ಒಂದು ಮಠದ ಪೀಠಾಧಿಕಾರಿಯನ್ನು ಆಯ್ಕೆ ಮಾಡುವಾಗ ಸತ್ಕುಲ ಪ್ರಸೂತನೂ ಬ್ರಹ್ಮಚಾರಿಯೂ ಆದವನನ್ನು ನೇಮಕ ಮಾಡುವುದು ನಡೆದು ಬಂದ ಸಂಪ್ರದಾಯ. ಪರಧನ ಪರಸ್ತ್ರೀ ಪರದೈವವ ಬಿಟ್ಟು ಪಂಚೇಂದ್ರಿಯ ಷಡ್ವರ್ಗಂಗಳ ಬಿಟ್ಟು ನಿರುಪಾಧಿಕರಾಗಿ ಪೂಜಿಸುವವರೇ ಸದ್ಭಕ್ತರು ಎಂದು ನಂಬಿದ, ಶಿವಭಕ್ತನೇ ಕುಲಜನು ಶಿವಭಕ್ತನೇ ಉತ್ತಮನು ಎಂದು ಭಾವಿಸಿದ ಉರಿಲಿಂಗದೇವ ಸಂಪ್ರದಾಯವನ್ನು ಕಡೆಗಣಿಸಿ, ತನಗೆ ಯೋಗ್ಯನೆಂದು ಕಂಡುಬಂದ ಶ್ವಪಚನನ್ನು, ಗೃಹಸ್ಥನನ್ನು ತನ್ನ ಪೀಠಾಧಿಕಾರಿಯಾಗಿ ನೇಮಿಸಿದುದು ಕ್ರಾಂತಿಕಾರಕ ಸಂಗತಿ. ಮಾನವ ನಿರ್ಮಿತ ಜಾತಿ ಹಾಗೂ ಹುಟ್ಟಿನಿಂದಲೇ ವ್ಯಕ್ತಿಯ ಯೋಗ್ಯತೆಯನ್ನು ನಿರ್ಣಯಿಸುವ ವರ್ಣಪದ್ಧತಿಗಳನ್ನು ಬಸವಾದಿ ಪ್ರಮಥರು ಬಲವಾಗಿ

---

6. ಉರಿಲಿಂಗಪೆದ್ದಿಯು 'ಲಿಂಗಮಹತ್ವ ಸಂಗ್ರಹ' ಎಂಬ ಗ್ರಂಥವನ್ನು ಬರೆದಿರುವುದಾಗಿ ಕವಿಚರಿತೆಕಾರರು ಹೇಳುವರು. (ನೋಡಿ: ಕರ್ನಾಟಕ ಕವಿಚರಿತೆ, ಸಂಪುಟ ೧ [ಪರಿಷತ್ ಆವೃತ್ತಿ] ಅನುಬಂಧ ೧, ಪು. ೩೩.

ಖಂಡಿಸಿದರು. ಅವರ ಸಿದ್ಧಾಂತವನ್ನು ಕಾರ್ಯರೂಪಕ್ಕೆ ತಂದ ಮಹಾಮಾನವತಾ ವಾದಿಯಾಗಿ ಉರಿಲಿಂಗದೇವ ಕಂಡುಬರುವನು. ಒಳ್ಳೆಯ ಪರಿಸರ ಹಾಗೂ ಮಾರ್ಗದರ್ಶನಗಳ ಜೊತೆಗೆ ಶ್ರದ್ಧೆ-ನಿಷ್ಠೆಗಳು ಈಡುಜೋಡಾದರೆ ಅಸಾಧ್ಯವೂ ಸಾಧ್ಯ ವಾಗಬಲ್ಲುದೆಂಬುದಕ್ಕೆ ಉರಿಲಿಂಗಪೆದ್ದಿಯ ಕಥೆ ಜ್ವಲಂತ ನಿದರ್ಶನವಾಗಿದೆ.

ಉರಿಲಿಂಗಪೆದ್ದಿ ವೇದ ಆಗಮ ಉಪನಿಷತ್ತುಗಳನ್ನು; ಪುರಾಣ, ಸ್ಮೃತಿ, ಶಿವಾದ್ವೈತಸಿದ್ಧಾಂತಗಳನ್ನು ಆಳವಾಗಿ ಅಭ್ಯಾಸಮಾಡಿದ್ದ ಮಹಾನ್ ವಿದ್ವಾಂಸ. ಚನ್ನಬಸವಣ್ಣನ ವಚನಗಳನ್ನು ನೆನಪಿಸುತ್ತದೆ ಇವನ ವಚನ ಶೈಲಿ. ಚನ್ನಬಸವಣ್ಣ ನಂತೆ ತತ್ತ್ವದ ಪ್ರತಿಪಾದನೆಗಾಗಿ ಇವನೂ ವೇದ, ಆಗಮ, ಉಪನಿಷತ್ತುಗಳನ್ನು ಆಧಾರವಾಗಿ ಕೊಟ್ಟಿರುವನು. (ಇವನಲ್ಲಿ ಚನ್ನಬಸವಣ್ಣನಿಗಿಂತಲೂ ಹೆಚ್ಚಾಗಿ ಸಂಸ್ಕೃತ ಶ್ಲೋಕಗಳು ಉಲ್ಲೇಖಗೊಂಡಿವೆ. ಅದರಲ್ಲೂ ೨೧೪, ೨೧೫ನೇ ವಚನಗಳು ಸಂಸ್ಕೃತ ಶ್ಲೋಕಭೂಯಿಷ್ಠವಾಗಿವೆ.) ಚನ್ನಬಸವಣ್ಣನಲ್ಲಿ ಬರುವಂತೆ ಇವನಲ್ಲೂ ಉದ್ದುದ್ದ ವಚನಗಳು ಕಾಣಬರುತ್ತವೆ. ಚನ್ನಬಸವಣ್ಣ ತನ್ನ ವಚನಗಳಲ್ಲಿ ವೀರಶೈವ ಧರ್ಮದ ತಾತ್ತ್ವಿಕಾಂಶವನ್ನು ಪ್ರಧಾನವಾಗಿ ವಿವರಿಸಿದಂತೆ ಇವನೂ ಹೇಳಿರುವನು. ಚನ್ನ ಬಸವಣ್ಣ ತನ್ನ ಕಾಲದ ಸಾಮಾಜಿಕ-ಧಾರ್ಮಿಕ ಜೀವನದ ವಿವರಗಳನ್ನು ಯಥೇಚ್ಛ ವಾಗಿ ಕೊಟ್ಟಂತೆ ಇವನೂ ನೀಡಿರುವನು. ಇವು ಮೇಲುನೋಟಕ್ಕೆ ಇವರಿಬ್ಬರಲ್ಲೂ ಕಾಣುಬರುವ ಸಾಮಾನ್ಯಾಂಶಗಳು. ಉರಿಲಿಂಗಪೆದ್ದಿಯ ಬದುಕೇ ಒಂದು ಪವಾಡ ಸದೃಶವಾದುದು. ಕೆಳವರ್ಗಕ್ಕೆ ಸೇರಿದ ಸಾಮಾನ್ಯನೂ ಅಲ್ಪಮತಿಯೂ ಆಗಿದ್ದ ಇವನ ಬದುಕು ಲಿಂಗದೀಕ್ಷೆಯಿಂದಾಗಿ, ಗುರುಕಾರುಣ್ಯದಿಂದಾಗಿ ಬಹುದೊಡ್ಡ ತಿರು ವನ್ನು ಪಡೆದುಕೊಂಡಿತು. 'ಸದ್ಗುರುವಿನಿಂದಾದ ಶಿಷ್ಯನು ಸದ್ಗುರುವಪ್ಪನು ತಪ್ಪದು ದಿಟದಿಟ ನೋಡಾ !! ಯಥಾ ಬೀಜಂ ತಥಾಂಕುರಂ ಎಂಬ ವಾಕ್ಯ ತಪ್ಪದು'(ವ. ೨೪) ಎಂಬ ಇವನ ಮಾತು ಸ್ವತಃ ಇವನ ಬದುಕಿಗೆ ಬರೆದ ಬಹುದೊಡ್ಡ ಭಾಷ್ಯದಂತಿದೆ. ಜ್ಞಾನಕ್ಕೆ ಉಚ್ಚ-ನೀಚರೆಂಬ ಭೇದಭಾವವಿಲ್ಲ. ವಯಸ್ಸಿನ ಕಟ್ಟುಪಾಡುಗಳಿಲ್ಲ. ಸಂಸಾರ ಬಂಧನವಿಲ್ಲ. ಜ್ಞಾನಪಿಪಾಸುವಿಗೆ ಬೇಕಾದುದು ಮುಖ್ಯವಾಗಿ ಶ್ರದ್ಧೆ. ಶ್ರದ್ಧಾವಂತ ನಿಗೆ ಜ್ಞಾನ ಲಭಿಸುತ್ತದೆ ಎಂಬ ಮಾತಿಗೆ ಜೀವಂತ ಉದಾಹರಣೆ ಉರಿಲಿಂಗಪೆದ್ದಿ. ಲಿಂಗವಂತನಾದ ಮೇಲೆ ದಿನಾರಾತ್ರಿ ಊಟ ನಿದ್ದೆಗಳ ಪರಿವೆಯಿಲ್ಲದೆ ಜ್ಞಾನದಾಹಿ ಯಾಗಿ ತನ್ನ ಹಸಿವನ್ನು ಹಿಂಗಿಸಿಕೊಂಡನು. ಜ್ಞಾನ ಇವನಿಗೆ ಅನಾಯಾಸವಾಗಿ ದಕ್ಕಿದ್ದಲ್ಲ, ಶ್ರಮಪೂರ್ವಕವಾಗಿ ಪಡೆದುಕೊಂಡದ್ದು.

ಉರಿಲಿಂಗಪೆದ್ದಿಯ ಮೇಲೆ ಸಂಸ್ಕೃತ ವಾಙ್ಮಯ ಬೀರಿರುವ ಪ್ರಭಾವ ಬಹು ದೊಡ್ಡದು. ತೀಕ್ಷ್ಣಮತಿಯಾದ ಉರಿಲಿಂಗಪೆದ್ದಿ ಅಲ್ಲಿನ ಸಾರಭೂತ ವಿಚಾರಗಳನ್ನು ತನ್ನ ಅನಿಸಿಕೆಗಳನ್ನು ಸಮರ್ಥಿಸಲು ಆಧಾರವಾಗಿ ಬಳಸಿಕೊಂಡು, ತನ್ನ ವಿಚಾರಪ್ರಣಾಲಿ

ಯನ್ನು ತರ್ಕಬದ್ಧಗೊಳಿಸುವನು, ಸೂತ್ರಪ್ರಾಯವಾಗಿಸುವನು ; ಪ್ರಮಾಣೀಕರಿಸುವನು. ಈ ಉದಾಹೃತ ಶ್ಲೋಕಗಳಿಂದಾಗಿ ಇವನ ವಿಚಾರಕ್ಕೊಂದು ಗಾಂಭೀರ್ಯ ಪ್ರಾಪ್ತವಾಗಿದೆ. ಇವನ ಬೌದ್ಧಿಕ ಪರಿಶ್ರಮದ ಬಗೆಗೆ ಗೌರವಾದರ ಭಾವನೆಗಳು ಸಹಜವಾಗಿ ಮನದಾಳದಲ್ಲಿ ಮೂಡುತ್ತವೆ. ತನ್ನ ಅನಿಸಿಕೆಗಳ, ತಾತ್ತ್ವಿಕವಾದ ವಿಷಯಗಳ ಪ್ರತಿಪಾದನೆಗೆ ಶ್ಲೋಕಗಳನ್ನು ಪ್ರಮಾಣವಾಗಿ ಸ್ವೀಕರಿಸಿದಂತೆಯೇ ಕೆಲವು ದರ್ಶನಗಳಲ್ಲಿನ ಕೊರತೆಯನ್ನು ಎತ್ತಿ ಹೇಳಿ, ಪ್ರತಿಪಾದಿಸುವ ವಿಷಯವನ್ನು ಅತ್ಯಂತ ಸಮರ್ಥ ರೀತಿಯಲ್ಲಿ ಹಲವು ದೃಷ್ಟಾಂತಗಳ ಮೂಲಕ ವಿವರಿಸುವ ಇವನ ಕೌಶಲ ಅಪೂರ್ವವಾದುದು. (ಉದಾಹರಣೆಗೆ ನೋಡಿ : ವ. ೨೦೭, ೨೧೬, ೨೪೦ ಇತ್ಯಾದಿ.) ಉರಿಲಿಂಗಿಪೆದ್ದಿಯ ಜ್ಞಾನ ಬರಿಯ ಪುಸ್ತಕದ್ದಲ್ಲ. ತಾರ್ಕಿಕ ಮನೋಭಾವದ ಉರಿಲಿಂಗಪೆದ್ದಿ ತಾನು ಓದಿದ್ದನ್ನು ಪೃಥಕ್ಕರಿಸಿ ತನ್ನ ನಂಬುಗೆಗೆ, ತನ್ನ ಬದುಕಿನ ಸರ್ವಾಂಗೀಣ ವಿಕಸನಕ್ಕೆ ಎಷ್ಟು ಬೇಕೋ ಅಷ್ಟನ್ನು ಸ್ವೀಕರಿಸಿರುವನು. 'ಪುರಾತನರ ಶ್ರೀಪಾದಂಗಳಲ್ಲಿ ಎನ್ನ ಶಿರಸ್ಪರ್ಶನದಿಂದ ಸಾಷ್ಟಾಂಗವೆರಗಲು ಸಾಯುಜ್ಯಪದವಯ್ಯಾ' ಎನ್ನುವ (ವ. ೨೩೭)ಉರಿಲಿಂಗಪೆದ್ದಿ ಕಣ್ಣಪ್ಪ, ಮಾದಾರ ಚೆನ್ನಯ್ಯ, ಚೋಳಿಯಕ್ಕ (ವ. ೩೧) ಸಿರಿಯಾಳ, ಸಿಂಧುಬಲ್ಲಾಳ, ನಂಬಿಯಣ್ಣ, ನಂಬವ್ವೆ, ಕೇಬಾವಿ ಭೋಗಣ್ಣ, ಬಸವಣ್ಣ ಮೊದಲಾದ ಪುರಾತನ ನೂತನರ ಬದುಕಿನಿಂದ ವಿಶೇಷವಾಗಿ ಪ್ರೇರಣೆಪಡೆದಿದ್ದು ಎಷ್ಟೋ ಕಡೆ ತನ್ನ ಅಭಿಪ್ರಾಯವನ್ನು ಪುರಾತನ ನೂತನರ ಬದುಕಿನ ಘಟನೆಗಳಿಂದ ಸಮರ್ಥಿಸಿರುವನು. ಬಸವಣ್ಣನಂತೂ ಉರಿಲಿಂಗಪೆದ್ದಿಗೆ ಆದರ್ಶಮೂರ್ತಿಯಾಗಿರುವನು. ಶ್ರೀಗುರುಲಿಂಗದಲ್ಲಿ ಬಸವಣ್ಣನನ್ನೂ ಬಸವಣ್ಣನಲ್ಲಿ ಶ್ರೀಗುರುಲಿಂಗವನ್ನೂ ಕಂಡೆನೆಂದು ಹೇಳಿಕೊಳ್ಳುವಲ್ಲಿ ಅವನ ಅನನ್ಯಭಕ್ತಿ ಶೃಂಗಪ್ರಾಯವಾಗಿದೆ (ವ. ೨೩೮). ಸದ್ಭಕ್ತಿ ಬಸವಣ್ಣನಿಗಲ್ಲದೆ ಸರ್ವಬ್ರಹ್ಮಾಂಡದೊಳಗಣ ಸರ್ವಲೋಕದ ದೇವ ದಾನವ ಮಾನವರಾರಿಗೂ ಅಳವಡದು. ಆರಿಗೂ ಆಗದು ಎಂದು ಹೇಳುವ ಉರಿಲಿಂಗಪೆದ್ದಿ :

> ಸದ್ಭಕ್ತಿ ಬಸವಣ್ಣಂಗಳವಟ್ಟಿತ್ತು, ಬಸವಣ್ಣನೇ ಭಕ್ತನು
> ಬಸವಣ್ಣನ ನೆನೆವುದೇ ಭಕ್ತಿಯ ಪಥವು
> ಬಸವಣ್ಣನ ನೆನೆವುದೇ ಮುಕ್ತಿಯ ಪಥವು
> ಬಸವಣ್ಣನ ನೆನೆದು ಬದುಕಿದೆನಯ್ಯಾ ! (ವ. ೭೪)

ಎಂಬ ಕೃತಾರ್ಥಭಾವದಲ್ಲಿ ತನ್ಮಯನಾಗಿಬಿಡುವನು. ಬಸವಣ್ಣನ ಎಷ್ಟೋ ವಚನಗಳ ಭಾವಗಳು ಉರಿಲಿಂಗಪೆದ್ದಿಯಲ್ಲಿ ಸೇರಿಹೋಗಿವೆ. ಬಸವಣ್ಣನ ದಟ್ಟವಾದ ಪ್ರಭಾವ ವಲಯಕ್ಕೆ ಸಿಕ್ಕಿಬಿದ್ದಾಗ ಇವೆಲ್ಲಾ ಆಗುವಂತಹದೇ !

ಉರಿಲಿಂಗಪೆದ್ದಿಯ ವಚನಗಳಲ್ಲಿ ಅವನ ಬದುಕಿನ ಎಳೆಗಳನ್ನು ಗುರುತಿಸಬಹುದು. ತನ್ನ ಬದುಕಿನ ದಿವ್ಯಮುಹೂರ್ತವಾದ, ಗುರು ಉರಿಲಿಂಗದೇವರಿಂದ

ಇಷ್ಟಲಿಂಗ ಪ್ರಾಪ್ತವಾದ ಸಂದರ್ಭವನ್ನು ಅವನು ಎರಡು ವಚನಗಳಲ್ಲಿ (ವ. ೮೩, ೧೧೦)ಭಾವತುಂದಿಲನಾಗಿ ನೆನೆದಿರುವನು. ತನ್ನಲ್ಲಿನ ಚೈತನ್ಯವನ್ನು ಜಾಗೃತಗೊಳಿಸಿದ ಗುರುವಿನ ಅಸಾಧಾರಣ ಹಿರಿಮೆಯನ್ನು ಮೈದುಂಬಿ ಹತ್ತಾರು ವಚನಗಳಲ್ಲಿ ಸ್ಮರಿಸಿರುವನು (ವ. ೨೪, ೩೭, ೧೩೬, ೨೨೨, ೨೩೦). ಗುರು ಅನುಗ್ರಹಿಸಿದ ಕಲ್ಲೇ ಅವನ ಬದುಕಿನಲ್ಲಿ ದೊಡ್ಡ ಮಾರ್ಪಾಟಿಗೆ ಕಾರಣವಾಯಿತು. ಕಲ್ಲನ್ನೇ ಲಿಂಗವೆಂದು ಸದ್ಭಾವದಿಂದ ನಂಬಿದ್ದರಿಂದ ಅವನ ಭಕ್ತಿ ಸದ್ಭಕ್ತಿಯಾಯಿತು. ಬಳ್ಳ, ಬೇವಿನ ಕೊರಡು, ಆಡಿನ ಹಿಕ್ಕೆ–ಇವುಗಳನ್ನು ಸದ್ಭಾವದಿಂದ ಭಾವಿಸಿ ಲಿಂಗವ ಮಾಡಿ ಸದ್ಭಕ್ತರಾದ ಪುರಾತನರ ಬದುಕನ್ನು ಆದರ್ಶದ ನೆಲೆಯಲ್ಲಿ ಉರಿಲಿಂಗಪೆದ್ದಿ ಸ್ವೀಕರಿಸುವನು (ವ. ೧೦೮). ಗುರು ಲಿಂಗ ಜಂಗಮವು ಏಕೀಭವಿಸಿ ಲಿಂಗರೂಪವಾಗಿ ಕರಸ್ಥಲಕ್ಕೆ ಬಂದು ಅಂಗೈ ಮೇಲಣ ನೆಲ್ಲಿಕಾಯಿಯಂತೆ ನೆಲೆಗೊಂಡಾಗ :

ಆಹಾ ಎನ್ನ ಸತ್ಯವೇ ! ಆಹಾ ಎನ್ನ ನಿತ್ಯವೇ !
ಆಹಾ ಎನ್ನ ಪುಣ್ಯವೇ ! ಆಹಾ ಎನ್ನ ಭಾಗ್ಯವೇ !
ಶಿವ ಶಿವ ! ಮಹಾದೇವ !!

ಎಂದು ಮಾತಿಗೆ ಮೀ ರಿ ದ ಸು ಖ ದ ಲ್ಲಿ ಮೈಮರೆಯುವನು (ವ. ೧೧೪). ಸಾಧನೆಯ ಮೊದಲ ಘಟ್ಟದಲ್ಲಿ ಪ್ರಾಪಂಚಿಕ ಸೆಳೆತಗಳಿಂದ ಮುಕ್ತನಾಗಲು ಉರಿಲಿಂಗಪೆದ್ದಿ ಪ್ರಯತ್ನಿಸಿದಂತಿದೆ. 'ಶಿವ ಶಿವಾ, ಆ ಹೊನ್ನು ಹೆಣ್ಣು ಮಣ್ಣಿನ ಆಸೆ ಘಾಸಿ ಮಾಡಿ ಕಾಡುತ್ತಿದೆ ! ಶಿವ ಶಿವಾ, ಈ ಆಶೆಯ ಕೆಡಿಸಿ ನಿಮ್ಮ ಶ್ರೀಪಾದದಾಸೆಯೆ ನಿವಾಸವಾಗಿರಿಸಯ್ಯಾ' ಎಂದು ಒಂದೆಡೆ (ವ. ೮೯) ಪ್ರಾರ್ಥಿಸಿದರೆ ಮತ್ತೊಂದೆಡೆ 'ಹೊನ್ನು ಹೆಣ್ಣು ಮಣ್ಣಿಗೆ ಕರ್ತನು ನೀನು. ತೇನ ವಿನಾ ತೃಣಾಗ್ರಮಪಿ ನ ಚಲತಿ ಎಂಬುದನರಿದೂ ಮದದಲ್ಲಿದ್ದು ಕೆಟ್ಟೆ. ಈ ಕೇಡಲ್ಲದೆ ಹಸಿವು ತೃಷೆ ವ್ಯಸನ ವಿಷಯ ಪಂಚೇಂದ್ರಿಯ ಷಡುವರ್ಗ ನೀನಾಗಿ ಕಾಡುತ್ತಿವೆ. ಕೆಟ್ಟೆ ! ಕೆಟ್ಟೆ ! ಶಿವಧೋ ! ಮಹಾದೇವ !!' ಎಂದು ಮೊರೆಯಿಡುವನು (ಪ. ೧೯೧).7 'ಎನ್ನ ದುರ್ಗುಣಂಗಳ ಕಳೆದು ಸದ್ಗುಣವ ಮಾಡಿ ನಿನ್ನೊಳಗುಮಾಡಿಕೊಳ್ಳಯ್ಯಾ' ಎಂದು ದೈನ್ಯದಿಂದ ಕೇಳಿಕೊಳ್ಳುವನು (ವ. ೯೩). ದುಷ್ಟನಿಗ್ರಹ ಶಿಷ್ಟಪರಿಪಾಲಕ ಗುಣಗಳನ್ನು ಹೊಂದಿರುವ ಶಿವನ

---

7. ಹೆಣ್ಣು ಹೊನ್ನು ಮಣ್ಣು ನಿನ್ನದೆಂದು ನಂಬಿರಲು, ಅವು ನಿನ್ನ ವಂಚಿಸಿ ಅನ್ಯರಿಗೆ ಹೋಹುದನರಿಯಿರೆ. ಅಯ್ಯೋ ! ಅಯ್ಯೋ ! ಕೆಡದಿರಿ !! ಕೆಡದಿರಿ !!! ಸತ್ಪಾತ್ರಕ್ಕೆ ಸಲಿಸಿ ಬದುಕಿರಯ್ಯಾ ! (ವ. ೧೦೯) ಎಂದು ಜನತೆಗೆ ಹಿತಬೋಧೆ ಮಾಡುವ ಉರಿಲಿಂಗಪೆದ್ದಿ, ಈ ತ್ರಿವಿಧಗಳೇ ಶಿವನು. ಇವುಗಳ ಮರೆಯಲ್ಲಿ ಶಿವನಿಪ್ಪನು ಎಂದು ಮತ್ತೊಂದು ವಚನದಲ್ಲಿ ಹೇಳುವನು (ವ. ೩೪೮).

ಲೀಲಾವಿಲಾಸಗಳನ್ನು ನೆನೆಯುತ್ತಾ 'ನಿಮ್ಮಂತಹ ಪುರುಷರುಗಳುಂಟೆ ? ಶಿವ ಶಿವಾ ! ದುಷ್ಟರುಗಳೆಲ್ಲರ ಶಿಕ್ಷಿಸಿದಿರಿ' ಆದರೆ ಚಂಚಲವಾದ ನನ್ನ ಮನವನ್ನು ನೀನು ಶಿಕ್ಷಿಸ ಲಾರೆ !' ನನ್ನ ಮನಸ್ಸನ್ನು ಶಿಕ್ಷಿಸಲು ನೀವು ಸಮರ್ಥರಲ್ಲದಿದ್ದರೆ, ಶಿವಭಕ್ತ ಅಪರಾಧಿ ಗಳ ಶಿಕ್ಷಿಸುವಂತಹ ಇಟಿಭಕ್ತ, ಕಾಲಾಗ್ನಿರುದ್ರ, ಮಡಿವಾಳ ಮಾಚಯ್ಯ–ಇವರಿ ಗಾದರೂ ಮೊರೆಯಿಟ್ಟು ನನ್ನ ಮನದ ಚಾಂಚಲ್ಯಕ್ಕೆ ಶಿಕ್ಷೆ ಕೊಡಿಸುವೆನು ಎಂದು ಉರಿಲಿಂಗಪೆದ್ದಿ ಶಿವನನ್ನೂ ವ್ಯಂಗ್ಯವಾಡುವನು (ವ. ೨೨೬).

ಉರಿಲಿಂಗಪೆದ್ದಿ ಕೆಳವರ್ಗದಿಂದ ಬಂದವನು. ಭಕ್ತನಾದ ಮೇಲೆ ಅವನಲ್ಲಿ ತನ್ನನ್ನು ಒಳಗುಮಾಡಿಕೊಂಡ ಹೊಸಧರ್ಮದ ಬಗೆಗೆ ಅಭಿಮಾನ, ನಿಷ್ಠೆ ಮಿಗಿಲಾಗು ವುದು ಸಹಜ. ಸ್ವಾಭಾವಿಕವಾಗಿ ಪೂಜೆ, ಆಚರಣೆಗಳಲ್ಲಿ ಹೆಚ್ಚಿನ ಶ್ರದ್ಧೆ ತಲೆದೋರು ವುದುಂಟು. ಒಂದು ಧರ್ಮದ ಹಳಬ ಲಿಂಗವಂತನಿಗೂ, ಹೊಸದಾಗಿ ಲಿಂಗವಂತ ನಾದವನಿಗೂ ಎದ್ದು ಕಾಣುವ ವ್ಯತ್ಯಾಸವಿರುವುದುಂಟು. ತನ್ನ ಸುತ್ತಮುತ್ತಣ ಪರಿ ಸರದ ಬಗೆಗೆ, ಆಚರಣೆಗಳ ಬಗೆಗೆ ಹಳಬನಿಗಿಂತ ಹೊಸಬ ಬಹುಬೇಗ ಸ್ಪಂದಿಸುತ್ತಾನೆ. ಇದಕ್ಕೆ ನಿದರ್ಶನವಾಗಿ ಮಾದಾರ ಚನ್ನಯ್ಯ, ಅಂಬಿಗರ ಚೌಡಯ್ಯ, ಉರಿಲಿಂಗಪೆದ್ದಿ ಗಳಂತಹವರನ್ನು ಗಮನಿಸಬಹುದು. ಇಷ್ಟಲಿಂಗವನ್ನು ಧರಿಸಿದ ಮೇಲೆ ಅವರ ದೈನಂದಿನ ಬದುಕಿನಲ್ಲಿ ಮಹತ್ತರ ಬದಲಾವಣೆಗಳಾಗಿವೆ. ಷಟ್ಸ್ಥಲ, ಅಷ್ಟಾವರಣ, ಪಂಚಾಚಾರಗಳ ಬಗೆಗೆ ತಿಳುವಳಿಕೆಯುಂಟಾಗಿ ತಮ್ಮ ಜೀವನದಲ್ಲಿ ಶರಣತತ್ತ್ವವನ್ನು ಅಳವಡಿಸಿಕೊಳ್ಳಲು ಅವರು ಪ್ರಯತ್ನಿಸುವಾಗ ತಮ್ಮ ಸುತ್ತಮುತ್ತಣ ಪರಿಸರವನ್ನು ಎಚ್ಚರದಿಂದ ಗಮನಿಸುವರು. ತಮ್ಮ ಬದುಕಿನ ಪರಮ ಧ್ಯೇಯವನ್ನು ಸುತ್ತಣವ ರಲ್ಲೂ ಕಾಣಹೊರಟು ಅಲ್ಲಿ ಅದಿಲ್ಲವಾದಾಗ ಸಹಜವಾಗಿ ಅವರು ವ್ಯಗ್ರರಾಗುವರು. ಆ ವ್ಯಗ್ರ ಮನೋಭಾವವನ್ನು ಅವರ ವಚನಗಳಲ್ಲಿ ಬರುವ ಸಾಮಾಜಿಕ ವಿಡಂಬನೆ ಗಳಲ್ಲಿ ನಾವು ಗುರುತಿಸಬಹುದಾಗಿದೆ. ಈ ಸಾಮಾಜಿಕ ವಿಡಂಬನೆಯ ಅಂತರಾಳದಲ್ಲೇ ಅಂದಿನ ಸಾಮಾಜಿಕ ಜೀವನದ ವಿವರಗಳು ಸೇರಿಹೋಗಿರುತ್ತವೆ. ಅವನ್ನು ಗುರುತಿಸಿ ಪ್ರತ್ಯೇಕಿಸುವುದರ ಮೂಲಕ ನಾವು ಆ ಕಾಲದ ಸಮಾಜ ಜೀವನವನ್ನು ಕೊಡಬಹುದು. ೧೨ನೇ ಶತಮಾನದ ಸಾಮಾಜಿಕ ಹಾಗೂ ಧಾರ್ಮಿಕ ಜೀವನದ ಚಿತ್ರವನ್ನು ನಾವು ವಚನಕಾರರ ವಚನಗಳಿಂದ ಪಡೆಯಲು ಸಾಧ್ಯವಿದೆ. ಉರಿಲಿಂಗಪೆದ್ದಿಯ ವಚನಗಳು ಈ ದಿಶೆಯಲ್ಲಿ ಹೆಚ್ಚಿನ ಮಾಹಿತಿ ನೀಡಬಲ್ಲುವು.

ಲಿಂಗವಂತರಾಗಿಯೂ ಅಂತರಂಗದಲ್ಲಿ ಅನ್ಯದೈವವನ್ನು ನೆನೆಯುವವರನ್ನು ಕಂಡ ಉರಿಲಿಂಗಪೆದ್ದಿ ಇಂತಹವರನ್ನು ಬಹಿರಂಗದಲ್ಲಿ ಭಕ್ತರು, ಅಂತರಂಗದಲ್ಲಿ ಭವಿಗಳು. ಇವರು ಸದಾಚಾರಕ್ಕೆ ಸಲ್ಲರು ಎನ್ನುವನು (ವ. ೯೨). ಸದ್ಭಕ್ತಿ ಷಟ್‌ಸ್ಥಲಕ್ಕೆ ಮುಖ್ಯವಾದುದು. ತನ್ನ ಸಮಕಾಲೀನ ಸಮಾಜದಲ್ಲಿ ಸದ್ಭಕ್ತಿಯಿಲ್ಲ

ದವರನ್ನು ಕಂಡು, ಲಿಂಗವ ನಂಬಿದವರಿಗಾದ ದುಸ್ಥಿತಿಯನ್ನೂ ಲಿಂಗವ ನಂಬಿದವರಿಗಾದ ಶಿವಪದವನ್ನೂ ಹಲವು ದೃಷ್ಟಾಂತಗಳ ಮೂಲಕ ಉರಿಲಿಂಗಪೆದ್ದಿ ವಿವರಿಸುವನು (ವ. ೯೪). ಸರ್ವಸಂಗ ಪರಿತ್ಯಾಗಿಯಾಗಿ ಅರಣ್ಯದಲ್ಲಿರುವವರನ್ನು ಕಾಡಿನಲ್ಲಿ ಸಂಚರಿಸುವ ಬೇಡನಿಗೂ, ಕ್ಷೇತ್ರಪರ್ಯಟನಮಾಡಿ ಬಂದವರನ್ನು ಮೃಗಕ್ಕೂ, ಅಶನವ ಬಿಟ್ಟವರನ್ನು ಪರಾಕಿಗೂ, ವಿಷಯವಾಸನೆ ಬಿಟ್ಟವರನ್ನು ಅಶಕ್ತ ನಪುಂಸಕನಿಗೂ, ನಿದ್ರೆ ಬಿಟ್ಟವನನ್ನು ಜಾರ ಚೋರನಿಗೂ, ಆಕಾಶಗಾಮಿನೀವಿದ್ಯೆ ಸಾಧಿಸಿದವನನ್ನು ಪಕ್ಷಿಗೂ, ನೀರಮೇಲೆ ನಡೆದು ಸಮುದ್ರವನ್ನು ದಾಟಿದವನನ್ನು ಮೀನುಗಳಿಗೂ, ದಾನಿಗಳನ್ನು ಕ್ಷತ್ರಿಯನಿಗೂ ಹೋಲಿಸುವ ಉರಿಲಿಂಗಪೆದ್ದಿ ಈ ಆಚರಣೆಗಳೆಲ್ಲವೂ ಫಲವಿಲ್ಲದವು, ಭಕ್ತಿಗೆ ಹಾಗೂ ಮುಕ್ತಿಗೆ ಸಲ್ಲದವು ಎನ್ನುವನು (ವ. ೧೨೬). ಯೋಗ್ಯನಲ್ಲದವನಿಗೆ ಹಣದಾಸೆಗೊ ಮಣ್ಣಿನಾಸೆಗೊ ಇನ್ನಾವುದೋ ಲೋಭಕ್ಕೋ ಒಳಗಾಗಿ ಉಪದೇಶ ನೀಡುವವರು, ವಿಭೂತಿಯನ್ನು ಅನುಗ್ರಹಿಸುವವರು, ಕಿವಿಯಲ್ಲಿ ಪಂಚಾಕ್ಷರೀ ಮಂತ್ರೋಪದೇಶ ಮಾಡಿ ಲಿಂಗವನ್ನು ಕೊಡುವವರು ಇದ್ದರು. ಸತ್ಪಾತ್ರನಲ್ಲದವನಿಗೆ ಲಿಂಗದೀಕ್ಷೆ ಸಲ್ಲದು ಎನ್ನುವ ಉರಿಲಿಂಗಪೆದ್ದಿ, ಹಾಗೆ ಅಯೋಗ್ಯನಿಗೆ ಲಿಂಗದೀಕ್ಷೆ ಮಾಡಿದ ಮೇಲೂ ಅವನು ಹಿಂದಣ ಪೂರ್ವಜನ್ಮವ ಬಿಡದಿದ್ದರೆ ಅಂತಹವರು 'ಹೊಲೆಯರ ಮನೆಯ ಶ್ವಾನಬಳಗದಂತೆ' ಎಂದು ಮಾರ್ಮಿಕವಾಗಿ ಹೇಳುವನು (ವ. ೧೩೩). ಇದೇ ಧೋರಣೆ 'ಭವಿತನಕ್ಕೆ ಹೇಸಿ ಭಕ್ತನಾದ ಬಳಿಕ ಮರಳಿ ಭವಿಯ ಬೆರಸಿದಡೆ ಆವ ಭಕ್ತನಲ್ಲ ಅವ ಶ್ವಾನನಿಂದ ಕರಕಷ್ಟ' (ವ. ೧೮೧) ಎಂಬ ಮಾತಿನಲ್ಲೂ ವ್ಯಕ್ತವಾಗಿದೆ. ಹೊನ್ನು ಹೆಣ್ಣು ಮಣ್ಣಿನ ಕಕ್ಕುಲತೆಗೆ ಒಳಗಾದ ಭಕ್ತರು ಭವಿಪಾಕವನ್ನು ತಮ್ಮ ಇಷ್ಟಲಿಂಗಕ್ಕೆ ಅರ್ಪಿಸಿ ಅದನ್ನು ಪ್ರಸಾದವೆಂದು ಸ್ವೀಕರಿಸುತ್ತಿದ್ದರು. ಇಂತಹವರನ್ನು ಗಮನಿಸಿದ ಉರಿಲಿಂಗಪೆದ್ದಿಯು, ಹಾಗೆ ಸ್ವೀಕರಿಸಿದ್ದೇ ಆದರೆ ನಾಯಿಯ ಮಾಂಸ, ನರರ ಮಾಂಸವನ್ನು ತಿಂದಂತೆ ಎಂದು ಹೇಸಿಗೆಪಟ್ಟು ನುಡಿದಿರುವನು (ವ. ೧೫೮). ಹದಿನೆಂಟು ತೀರ್ಥಕ್ಷೇತ್ರಗಳಲ್ಲಿ ಮಿಂದುಬಂದವರು, ಸಂಧ್ಯಾವಂದನೆ, ಸಮಾಧಿ, ಜಪ, ತಪ, ಮಂತ್ರ ಮಾಡುವವರು ಮಾತಿನ ಜಾಣರು—ಇವರು ಹಿರಿಯರೆ? ಎಂದು ಪ್ರಶ್ನಿಸುವ ಉರಿಲಿಂಗಪೆದ್ದಿ ಕೋಪ, ಕುಟಿಲ, ಸಟೆ, ಮಾಯೆ, ಅರಿಷಡ್ವರ್ಗ, ಪಂಚೇಂದ್ರಿಯಗಳಿಗೆ ವಶರಾದವರು ಭಕ್ತರೇ ಅಲ್ಲ ಎನ್ನುವನು (ವ. ೧೫೯). ಗುರುಕಾರುಣ್ಯವಾಗಿ ಶಿವಲಿಂಗ ಧರಿಸಿದ ಮೇಲೂ ಲಿಂಗಾಂಗ ಸಾಮರಸ್ಯವನ್ನು ತಿಳಿದ ಮೇಲೂ ಗುರುವಾಜ್ಞೆಯನ್ನು ಮೀರಿ ದ್ವಿಜರನ್ನು ಸನ್ಯಾಸಿಗಳನ್ನು ಭೇಟಿಮಾಡಿ ಉಪದೇಶ ಸ್ವೀಕರಿಸುವುದು; ಭಿನ್ನದರ್ಶನಗಳ ಧರ್ಮಶಾಸ್ತ್ರವನ್ನು ಕೇಳಿ ಮರಳಿ ಉಪದೇಶ ಹೊಂದುವುದು ವಾಡಿಕೆಯಲ್ಲಿದ್ದಿತು. ಅಂತಹ ವರ್ತನೆಯನ್ನು ಗುರುದ್ರೋಹವೆಂದು ಉರಿಲಿಂಗಪೆದ್ದಿ ಖಂಡಿಸುವನು. ಶ್ರೀಗುರುವೇ ಅಧಿಕ! ಶಿವಲಿಂಗವೇ ಅಧಿಕ! ಶಿವಲಿಂಗಾರ್ಚನೆಯೇ ಅಧಿಕ! ಎಂದು ಘೋಷಿಸುವನು (ವ. ೧೮೦). ಅರ್ಹನ್, ಬುದ್ಧ, ಚಾರ್ವಾಕ.

ಮೀಮಾಂಸಕ, ನೀಲಪಟ, ಸೌರ, ಶಾಕ್ತೇಯ, ವೈಷ್ಣವ, ಗಾಣಾಪತ್ಯ–ಇವೇ ಮೊದಲಾದ ಪಂಥದವರನ್ನು ಪ್ರಸ್ತಾಪಿಸುವ ಉರಿಲಿಂಗಪೆದ್ದಿ ಇವರು 'ಒಡಲ ಮಹಪಂ ಸುಟ್ಟು ಮಟ್ಟೆಯನಿಟ್ಟು' ಉಭಯಗೆಟ್ಟು ಶಿವಧ್ಯಾನವಿಲ್ಲದೆ ನರಕಕ್ಕಿಳಿದು ಅಧಮರಾಗಿ ಹೋದುದನ್ನು ಒಂದು ವಚನದಲ್ಲಿ ಪ್ರಸ್ತಾಪಿಸಿರುವನು (ವ. ೨೮೧). ಅನ್ಯ ದೈವದ ಭಜನೆಮಾಡುವ ಭವಿಗಳ ಸಂಗವ ಮಾಡುವ ಲಿಂಗವಂತರನ್ನು ನೋಡಿ ಉರಿಲಿಂಗಪೆದ್ದಿ ನೀವು ಹೇಗೆ ಲಿಂಗವಂತರಾದಿರಿ ? ಎಂದು ಪ್ರಶ್ನಿಸುವನು (ವ. ೨೧೯). ಜಾತಿಗಳ ಬಗೆಗೆ ಹೇಳುತ್ತಾ, ರೇಣುಕಾದೇವಿಯ ಮಗನೇ ಬ್ರಾಹ್ಮಣನು, ಮಾತಂಗಿಯ ಮಗನೇ ಹೊಲೆಯನು. ಇವರಿಬ್ಬರೂ ಜಮದಗ್ನಿಗೆ ಹುಟ್ಟಿದವರು. ಇದಕ್ಕೆ ಸಾಕ್ಷಿ ಭಾರದ್ವಾಜ, ವಿಶ್ವಾಮಿತ್ರ, ಅಗಸ್ತ್ಯ, ನಾರದ, ಕೌಂಡಿಲ್ಯರು. ಈ ಐವರ ಸಾಕ್ಷಿ ಯಲ್ಲಿ ಬ್ರಾಹ್ಮಣ ಹಾಗೂ ಹೊಲೆಯರು ಮಾಡಿಕೊಂಡ ವಿಭಾಗದ ಕ್ರಮ ಹೀಗಿದೆ : ಗ್ರಾಮದೊಳಗಣ ಸೀಮೆಯ ಗೃಹವನು ಹೊಲೆಯರಿಗೆ ಕೊಡುವುದು. ಸತ್ತ ಹಸುವ– ನೆಳೆದುಕೊಂಡು ಹೋಗುವವರೇ ಹೊಲೆಯರು. ಜೀವದ ಹಸುವ ಹದಿನೆಂಟು ಜಾತಿಯ ಮಂಚದಡಿಯಲ್ಲಿ ನುಸುಳಿ ಗೋದಾನಮುಖದಲ್ಲಿ ಕೊಂಡುಹೋಗುವವರೇ ಬ್ರಾಹ್ಮಣರು. ಬ್ರಾಹ್ಮಣರಿಗೆ ಹೊಲೆಯರ ಸಂಬಂಧ ಬೇಡವೆಂದು ಅನ್ನಿಸಿದಾಗ ಸಂಬೋಳಿ ಎಂಬ ಹೆಸರು ಕೊಟ್ಟು ತೊಲಗಿಸುವುದು (ವ. ೨೪೮). ಸಮಾಜದಲ್ಲಿನ ಜಾತಿವ್ಯವಸ್ಥೆಯು ಆಯಾಯಾ ಗೋತ್ರ ಹಾಗೂ ಋಷಿಗಳ ವಂಶಾನುಸಾರಿಯಾಗಿಯೂ: ಬ್ರಾಹ್ಮಣನ ಮಗ ಬ್ರಾಹ್ಮಣನು, ಕ್ಷತ್ರಿಯನ ಮಗ ಕ್ಷತ್ರಿಯನು, ವೈಶ್ಯನ ಮಗ ವೈಶ್ಯನು, ಶೂದ್ರನ ಮಗ ಶೂದ್ರನು–ಹೀಗೆ ಹುಟ್ಟಿನಿಂದಾಗಿಯೂ ರೂಪುಗೊಂಡು ದನ್ನು ಉರಿಲಿಂಗಪೆದ್ದಿ ಒಂದು ವಚನದಲ್ಲಿ ಪ್ರಸ್ತಾಪಿಸಿರುವನು (ವ. ೨೪೯). ಕೊರಳಲ್ಲಿ ಕವಡೆಯಕಟ್ಟಿಕೊಂಡು ನಾಯಾಗಿ ಬೊಗಳುವ ಮೈಲಾರನ ಭಕ್ತರು, ಕೊರಳಲ್ಲಿ ಕವಡೆಯ ಕಟ್ಟಿಕೊಂಡು ಕುರುಳು ಬೆರಳ ಕಡಿದುಕೊಳ್ಳುವ ಭೈರವನ ಆರಾಧಕರು, ಕೊರಳಿಗೆ ಕವಡೆಯ ಕಟ್ಟಿ ತಲೆಯಲ್ಲಿ ಕೆರಹನ್ನು ಹೊತ್ತು ಬೇವಿನ ಸೊಪ್ಪನ್ನು ಉಟ್ಟು ಲಜ್ಜೆ ಯನ್ನು ನೀಗಿದ ಮಾಯಿರಾಣಿಯ ಭಕ್ತರು –ಹೀಗೆ ತನ್ನ ಕಾಲದಲ್ಲಿದ್ದ ಕ್ಷುದ್ರದೈವ ಹಾಗೂ ಅವುಗಳ ಭಕ್ತರ 'ಆರಾಧನಾಕ್ರಮ'ವನ್ನು ಉರಿಲಿಂಗಪೆದ್ದಿ ಹೇಳಿರುವನು (ವ. ೨೫೮). ಸಮಾಧಿ ಹೋಗುವ ಪದ್ಧತಿ ತನ್ನ ಕಾಲದಲ್ಲಿ ಇದ್ದುದನ್ನು ಉರಿಲಿಂಗ ಪೆದ್ದಿ ವಚನವೊಂದರಲ್ಲಿ ಪ್ರಸ್ತಾಪಿಸಿರುವನು (ವ. ೨೭೨).

ಧರ್ಮಪ್ರಧಾನವಾದ ಸಮಾಜದಲ್ಲಿ, ಅದರಲ್ಲೂ ವೀರಶೈವ ಧರ್ಮದ ತೆಕ್ಕೆಗೆ ಒಳಗಾದವರಲ್ಲಿ ಆ ಧರ್ಮದ ತತ್ತ್ವಗಳ ಬಗೆಗಿನ ಸ್ಪಷ್ಟ ತಿಳುವಳಿಕೆ ಅಗತ್ಯ. ಉರಿಲಿಂಗ ಪೆದ್ದಿಯ ವಚನಗಳು ಪ್ರಧಾನವಾಗಿ ವೀರಶೈವಧರ್ಮದ ತತ್ತ್ವಗಳ ಪ್ರತಿಪಾದನೆ ಗಾಗಿಯೇ ಬರೆದಂತಿವೆ. ಭಕ್ತನ ಗುಣಲಕ್ಷಣ, ಗುರು–ಶಿಷ್ಯ ಸಂಬಂಧ, ಗುರುವಿನ ಮಹಿಮೆ, ಪಾದೋದಕ–ವಿಭೂತಿ–ರುದ್ರಾಕ್ಷಿಗಳ ಅಲಘು ಮಹಿಮೆ, ಪ್ರಾಣಲಿಂಗದ

ಪೂಜಾಕ್ರಮ, ಷಟ್‌ಸ್ಥಲದ ಜೀವಾಳ–ಹೀಗೆ ವೀರಶೈವ ಧರ್ಮಕ್ಕೆ ಸಂಬಂಧಿಸಿದ ಸಕಲ ವಿವರಗಳನ್ನೂ ಸರಳವಾಗಿ ಹೇಳುವ ಒಂದು ಪ್ರಯತ್ನವನ್ನು ಉರಿಲಿಂಗಪೆದ್ದಿಯ ವಚನಗಳಲ್ಲಿ ನಾವು ಕಾಣಬಹುದು. ಸೃಷ್ಟಿ–ಸೃಷ್ಟಿಕರ್ತ ಇವರ ಪರಸ್ಪರ ಸಂಬಂಧ, ಪರವಸ್ತುವಿನ ಸ್ವರೂಪ, 'ತತ್ತ್ವಮಸಿ' ಎಂಬ ಮಹಾವಾಕ್ಯಾರ್ಥದ ವಿವರಣೆ ಇವೆಲ್ಲ ವೀರಶೈವ ದರ್ಶನಕ್ಕೆ ಅನುಗುಣವಾಗಿ ನಿರೂಪಿಸಲ್ಪಟ್ಟಿವೆ. ಶಿವಯೋಗದ ರಹಸ್ಯವನ್ನು ಬಲ್ಲವನಾದ ಉರಿಲಿಂಗಪೆದ್ದಿ ಸರ್ವವೂ ಪರಬ್ರಹ್ಮ, ಶ್ರೀಗುರುವಿನ ಪಾದ ಧ್ಯಾನವೇ ಯೋಗ ಎಂದು ಒಂದೆಡೆ (ವ. ೧೦೪) ಹೇಳುವನು.

ಉರಿಲಿಂಗಪೆದ್ದಿಯಂತೆ ಅವನ ಪತ್ನಿ ಕಾಳವ್ವೆಯೂ ಶ್ರೇಷ್ಠ ಅನುಭಾವಿ. ಉರಿಲಿಂಗದೇವರಿಂದ ದೀಕ್ಷೆ ಪಡೆದ ಈಕೆ ಸತ್ಯ ಸದಾಚಾರಗಳಿಂದ ಪ್ರಸಿದ್ಧಿ ಪಡೆದಿರಬೇಕು. ಮಲ್ಲಿಕಾರ್ಜುನ ಪಂಡಿತಾರಾಧ್ಯ ಹಾಗೂ ಪಾಲ್ಕುರಿಕೆ ಸೋಮನಾಥರ 'ಗಣ ಸಹಸ್ರನಾಮಾವಳಿ'ಯಲ್ಲಿ ಷೋಡಶ ಗಣರಲ್ಲಿ ಒಬ್ಬಳಾಗಿ ಉಲ್ಲೇಖಗೊಂಡಿರುವುದು ಮೇಲಣ ಮಾತಿಗೆ ಸಾಕ್ಷಿಯಾಗಿದೆ. ಪತಿಯಂತೆ, ವಚನಗಳನ್ನು ಈಕೆಯೂ ಬರೆದಿದ್ದು ಸದ್ಯ ಇವಳ ಹದಿಮೂರು ವಚನಗಳು ಮಾತ್ರ ಬೆಳಕು ಕಂಡಿವೆ.8

ಬಸವಣ್ಣನು ನಿರ್ವಂಚಕನು, ನಿರಾಶಾಧರಿತನು. ಸುಚರಿತ್ರನು ಸದ್ಭಕ್ತಿ ಪುರುಷನು, ಮಹಾಪುರುಷನು ಎಂದೆಲ್ಲಾ ಹೇಳುವ (ವ. ೨೮೨) ಉರಿಲಿಂಗಪೆದ್ದಿ ತನ್ನ ಕೊನೆಗಾಲದಲ್ಲಿ ಕಲ್ಯಾಣದಲ್ಲಿ ಇದ್ದಿರಬಹುದು. ಅವನ ಸಮಾಧಿ ಕಲ್ಯಾಣದಲ್ಲಿ ಉರಿಲಿಂಗಪೆದ್ದಿಯ ಮಠದಲ್ಲಿ ಇರುವುದಾಗಿ ಫ. ಗು. ಹಳಕಟ್ಟಿಯವರು ಹೇಳುವರು.9 "ಕಲ್ಯಾಣ, ಕೊರಳಿ, ಬೇವಿನ ಚಿಂಚೋಳಿ, ಮತ್ತು ಭಾಲ್ಕಿಗಳಲ್ಲಿ ಇಂದಿಗೂ ಉರಿಲಿಂಗಪೆದ್ದಿಗಳ ಮಠಗಳಿವೆಯೆಂದೂ ಅವೆಲ್ಲವುಗಳಿಗೂ ಹರಿಜನರೇ ಭಕ್ತರೆಂದೂ, ಮಠಾಧಿಕಾರಿಗಳು ಮಾತ್ರ ಲಿಂಗಾಂಗಿಗಳೆಂದೂ ಫ.ಗು. ಹಳಕಟ್ಟಿಯವರು ಅಭಿಪ್ರಾಯಪಡುವರು. ಕಲ್ಯಾಣದ ಬಸವಾದಿ ಶರಣರ ಆದರ್ಶಕ್ಕನುಗುಣವಾಗಿ ಉರಿಲಿಂಗದೇವರು ಶ್ವಪಚನೊಬ್ಬನನ್ನು ತಮ್ಮ ಪೀಠದ ಉತ್ತರಾಧಿಕಾರಿಯಾಗಿ ಮಾಡಿದರೂ ಆ ಮಠ ವೀರಶೈವ ಮಠಗಳಲ್ಲಿ ಒಂದಾಗದೆ ಪ್ರತ್ಯೇಕವಾಗಿ ನಿಂತುದು ಆ ಉಚ್ಚ ಆದರ್ಶಕ್ಕಾದ ಸೋಲನ್ನು ಎತ್ತಿಹೇಳುತ್ತದೆ:

---

8. ಶಿವಶರಣೆಯರ ವಚನಗಳು : (ಸಂ) ಡಾ॥ ಆರ್. ಸಿ. ಹಿರೇಮಠ, ಪು. ೩೮೭–೩೯೧.

9. ನೋಡಿ : ಶಿವಶರಣರ ಚರಿತೆ.

ಅನುಬಂಧ

# ಲಿಂಗವಂತ ಹರಿಜನರು

ಉರಿಲಿಂಗಪೆದ್ದಿಯ ಕೊಡುಗೆ ೧೨ನೇ ಶತಮಾನದ ವಚನ ಸಾಹಿತ್ಯಕ್ಕೆ ಮಹತ್ವ ಪೂರ್ಣವಾದುದು. ಅವನ ಬದುಕು–ಸಾಹಿತ್ಯ ೧೨ನೇ ಶತಮಾನದಲ್ಲಿ ನಡೆದ ಶರಣರ ವೈಚಾರಿಕ ಕ್ರಾಂತಿಯ ಸಾಫಲ್ಯವನ್ನು ಅರ್ಥಪೂರ್ಣವಾಗಿ ಸಂಕೇತಿಸುತ್ತದೆ. ಉರಿ ಲಿಂಗಪೆದ್ದಿ ಅಸ್ಪೃಶ್ಯಕುಲದಲ್ಲಿ ಹುಟ್ಟಿಬಂದರೂ ಗುರುಕರುಣೆ ಹಾಗೂ ಕಠಿಣ ಸಾಧನೆ ಯಿಂದ ಸಾಮಾಜಿಕ ಮುನ್ನಣೆಯನ್ನು ಪಡೆದು ಖ್ಯಾತನಾದನು. ಅವನು ಸ್ವಂತ ವರ್ಚಸ್ಸಿನಿಂದ ಪ್ರಸಿದ್ಧ ವೀರಶೈವ ಮಠವೊಂದರ ಪೀಠಾಧಿಕಾರಿಯಾದನು. ಅಸ್ಪೃಶ್ಯ ನೊಬ್ಬ ತನ್ನ ಸ್ವಂತ ಯೋಗ್ಯತೆಯಿಂದ ಗುರುಪೀಠವೇರಿದುದು ೧೨ನೇ ಶತಮಾನದ ಧಾರ್ಮಿಕ ಇತಿಹಾಸದಲ್ಲಿ ಅಪೂರ್ವವಾದುದು. ಉರಿಲಿಂಗಪೆದ್ದಿಯ ನಂತರ ಅವನ ಸಂಪ್ರ ದಾಯದವರು ಆತನ ಹೆಸರಿನ ಮಠಗಳನ್ನು ಕಲ್ಯಾಣ, ಕೊರಳಿ (ಗುಲ್ಬರ್ಗಾ ಜಿಲ್ಲೆಯ ಸೇಡಂ ತಾಲ್ಲೂಕು), ಭಾಲ್ಕಿ, ಚೀವಿನ ಚಿಂಚೋಳಿ ಈ ನಾಲ್ಕು ಸ್ಥಳಗಳಲ್ಲಿ ನಿರ್ಮಿಸಿರು ವರು. ಇತ್ತೀಚಿನ ಶೋಧನೆಯಿಂದ ಉರಿಲಿಂಗಪೆದ್ದಿಯ ಸಂಪ್ರದಾಯಸ್ಥರು ಮೈಸೂರು, ಮಂಡ್ಯ, ಹಾಸನ ಜಿಲ್ಲೆಗಳಲ್ಲಿ ಹಾಗೂ ಅವುಗಳ ಸಮೀಪವಿರುವ ಪ್ರದೇಶ ಗಳಲ್ಲಿ ಚೆದುರಿ ಹೋಗಿರುವುದು ತಿಳಿದುಬರುತ್ತದೆ. ಮೈಸೂರಿನಲ್ಲಿರುವ ಗಾಂಧಿನಗರ ; ಮೈಸೂರು ಜಿಲ್ಲೆಯ ಟಿ. ನರಸೀಪುರ ತಾಲ್ಲೂಕಿಗೆ ಸೇರಿದ ಪುರಿಗಾಲಿ,ಸಿರಿಮಳ್ಳಿ,ಮುಡು ಕುತೊರೆ,ದೊಡ್ಡಪುರ; ಚಾಮರಾಜನಗರ ತಾಲ್ಲೂಕಿಗೆ ಸೇರಿದ ದಿಡ್ಡಾಪುರ, ದಡದಳ್ಳಿ; ಕೊಳ್ಳೇಗಾಲ ತಾಲ್ಲೂಕಿಗೆ ಸೇರಿದ ಸಿದ್ಧಯ್ಯನಪುರ, ಮಣಗಳ್ಳಿ, ಬಂಡಳ್ಳಿ, ನರಿಪುರ ; ಮಂಡ್ಯ ; ಮಂಡ್ಯ ಜಿಲ್ಲೆಯ ಮಳವಳ್ಳಿ ತಾಲ್ಲೂಕಿಗೆ ಸೇರಿದ ಬೆಳಕವಾಡಿ, ಬ್ಲಫ್ ; ಹೆಗ್ಗಡದೇವನಕೋಟೆಗೆ ಸೇರಿದ ಎಂ. ಕನ್ನೇನಹಳ್ಳಿ ; ಚನ್ನರಾಯಪಟ್ಟಣ ; ಹುಣ ಸೂರು ತಾಲ್ಲೂಕಿಗೆ ಸೇರಿದ ಬೆಂಕಿಪುರ ; ಬೆಂಗಳೂರು–ಈ ಸ್ಥಳಗಳಲ್ಲಿ ಉರಿಲಿಂಗ ಪೆದ್ದಿಯ ಸಂಪ್ರದಾಯಸ್ಥರು ಇರುವುದಾಗಿ ತಿಳಿದುಬಂದಿದೆ.[1]

---

1. ಇಲ್ಲಿ ನನಗೆ ತಿಳಿದು ಬಂದಷ್ಟು ಸ್ಥಳಗಳ ವಿವರಗಳನ್ನು ಮಾತ್ರ ಕೊಟ್ಟಿದ್ದೇನೆ. ಇದೂ ಅಪೂರ್ಣ. ಮೈಸೂರು, ಮಂಡ್ಯ, ಹಾಸನ ಜಿಲ್ಲೆಗಳಲ್ಲಿರುವ ಉರಿಲಿಂಗ ಪೆದ್ದಿಯ ಸಂಪ್ರದಾಯಸ್ಥರು ಒಟ್ಟಾರೆ ಸೇರಿ ಸಂಘವೊಂದನ್ನು ಮಾಡಿಕೊಂಡು ಆ ಮೂಲಕ ತಮ್ಮ ಜನಾಂಗದವರನ್ನು ಮೇಲೆತ್ತುವ ಯೋಜನೆಯನ್ನು ರೂಪಿಸಿ ಕಳೆದ ಒಂದೆರಡು ವರುಷಗಳಿಂದ ಜನರನ್ನು ಸಂಘಟಿಸುವ ಮಹತ್ವದ ಕಾರ್ಯ ಕೈಗೊಂಡಿರುವರು. ತಮ್ಮ ಜನಾಂಗದವರ ಸಮಗ್ರ ವಿವರ ಕಲೆಹಾಕುವ

ಉತ್ತರ ದೇಶದಿಂದ ಬಂದ ಶಿವಯೋಗಿಸ್ವಾಮಿಗಳು ಮೈಸೂರಿನ ಸುತ್ತಮುತ್ತ ಉರಿಲಿಂಗಪೆದ್ದಿಯ ಸಂಪ್ರದಾಯ ಬೆಳೆಯಲು ಕಾರಣಪುರುಷರು. ಗುಲ್ಬರ್ಗ ಜಿಲ್ಲೆ ಸೇಡಂ ತಾಲ್ಲೂಕಿಗೆ ಸೇರಿದ ಕೋರಳಿಯಲ್ಲಿರುವ ಉರಿಲಿಂಗಪೆದ್ದಯ್ಯ ಮಹಾಸಂಸ್ಥಾನ ಮಠದ ಮೂಲಪೀಠಾಧ್ಯಕ್ಷರಾಗಿದ್ದ ಶಿವಯೋಗಿಸ್ವಾಮಿಗಳು ಮೈಸೂರು ಕಡೆ ಸಂಚಾರ ಕೈಗೊಂಡು ಅನೇಕರಿಗೆ ಲಿಂಗಧಾರಣೆ ಮಾಡಿದರು. ಇವರಿಗೆ ಸಹಾಯಕರಾಗಿ ನಿಂತವರು ಇವರ ಶಿಷ್ಯರಾದ (ಕನಕಪುರದ) ಶಿವಾನಂದಸ್ವಾಮಿಗಳು ಹಾಗೂ ಮುದ್ದುಮಾಡಪ್ಪಸ್ವಾಮಿಗಳು. ಶಿವಯೋಗಿಸ್ವಾಮಿಗಳು ವಿರಕ್ತಮೂರ್ತಿಗಳು. ಒಂದೆಡೆ ನಿಲ್ಲದೆ ಅವರು ನಿತ್ಯ ಸಂಚಾರಿಗಳಾಗಿ ಸತ್ಯ, ಸದಾಚಾರ, ಸತ್‌ಶೀಲ ಸಂಪನ್ನರಾದ ಹರಿಜನರಿಗೆ ಲಿಂಗಧಾರಣೆಮಾಡಿ ಅವರ ಬದುಕಿಗೊಂದು ಹೊಸ ತಿರುವನ್ನು ತಂದುಕೊಟ್ಟರು. ಈಗ್ಗೆ ೩೫ ವರ್ಷಗಳ ಹಿಂದೆ ಮತೀಯಶ್ರದ್ಧೆ ಸಮಾಜದಲ್ಲಿ ಆಳವಾಗಿ ಬೇರೂರಿದ್ದಿತು. ತೀರಾ ಹಿಂದುಳಿದಿದ್ದ, ಉಚ್ಚವರ್ಣೀಯರಿಂದ ವಿಶೇಷವಾಗಿ ಶೋಷಣೆಗೆ ಒಳಗಾಗಿದ್ದ ಅಂತ್ಯಜರಿಗೆ ಆಗ ಸ್ವಂತ ವ್ಯಕ್ತಿತ್ವವೇ ಇರಲಿಲ್ಲ. ಅವರ ಜೀವನದಲ್ಲಿ ಸುಧಾರಣೆಗೆ ಅವಕಾಶವೇ ಇರಲಿಲ್ಲ. ಆರ್ಥಿಕವಾಗಿ ಹಿಂದುಳಿದಿದ್ದ ಅವರು ವಿದ್ಯೆಯ ಗಂಧವೇ ಇಲ್ಲದೆ ಧನಿಕರ ತೊತ್ತಾಗಿ ಮನೆ ಹಾಗೂ ಹೊಲಗದ್ದೆಗಳ ಕೆಲಸಗಳಲ್ಲಿ ಮೈಮುರಿದು ದುಡಿಯುತ್ತಿದ್ದರು. ಒಡೆಯರು ಕೊಟ್ಟಿದ್ದನ್ನು ತಿಂದು, ಮಾನಸಿಕ ಹಾಗೂ ದೈಹಿಕ ಕ್ಲೇಶಗಳನ್ನು ಮರೆಯಲು ಸಾರಾಯಿ ಕುಡಿದು ಮೃಗೀಯ ಜೀವನ ನಡೆಸುತ್ತಿದ್ದರು. ಸೆರೆ, ಮಾಂಸಗಳಿಗೆ ದಾಸರಾಗಿದ್ದ ಇವರು ತಮ್ಮ ದುರ್ವ್ಯಸನಗಳ ಪೂರೈಕೆಗಾಗಿ ಹೆಂಡತಿ ಮಕ್ಕಳನ್ನು ನಿರ್ಲಕ್ಷಿಸುತ್ತಿದ್ದರು. ಮಾನ ಮುಚ್ಚುವಷ್ಟು ಬಟ್ಟೆಯಿಲ್ಲದೆ, ಕುಡಿಯಲು ಗಂಜಿಯಿಲ್ಲದೆ ನಿತ್ಯವೂ ಕಣ್ಣೀರಿನಲ್ಲಿ ಇವರ ಹೆಂಡತಿ ಮಕ್ಕಳು ಕೈತೊಳೆಯುತ್ತಿದ್ದರು. ಹೊಲಸಿನಿಂದ ನಾರುವ ವಾತಾವರಣದಲ್ಲಿ ಗುಡಿಸಲು ಕಟ್ಟಿಕೊಂಡು ಪ್ರಾಣಿಗಳೊಡನೆ ಪ್ರಾಣಿಗಳಾಗಿ ವಾಸಿಸುತ್ತಿದ್ದ ಈ ಹರಿಜನರ ಸ್ಥಿತಿ ಹೃದಯ ಮಿಡಿಯುವಂತಿತ್ತು. ಇಂತಹವರ ಬದುಕಿನಲ್ಲಿ ಪರಿವರ್ತನೆ ಅಥವಾ ಸುಧಾರಣೆ ತರುವುದು ತೀರಾ ಕಷ್ಟದ ಕೆಲಸ. ಆರ್ಥಿಕವಾಗಿ, ಸಾಮಾಜಿಕವಾಗಿ, ಶೈಕ್ಷಣಿಕವಾಗಿ ತೀರಾ ಹಿಂದುಳಿದಿದ್ದ ಇವರನ್ನು ಸುಧಾರಿಸುವುದೇ ಪ್ರಧಾನ ಗುರಿಯಾಗಿ ಶಿವಯೋಗಿಸ್ವಾಮಿಗಳು ಮೈಸೂರಿನ ಸುತ್ತಮುತ್ತ ಸಂಚರಿಸಿ ಹರಿಜನರ ನಡುವೆ ಕೆಲದಿವಸಗಳಿದ್ದು ಹರಿಜನರ ಬದುಕಿಗೆ ಒಂದು ಹೊಸರೂಪ ಕೊಡಲು

---

ಕಾರ್ಯ ಇತ್ತೀಚೆಗೆ ನಡೆದಿದೆ. ನನಗೆ ತಿಳಿದು ಬಂದಂತೆ, ಮೇಲಣ ಮೂರು ಜಿಲ್ಲೆಗಳಲ್ಲಿ ಕನಿಷ್ಠ ಒಂಬತ್ತು ಸಾವಿರ ಉರಿಲಿಂಗಪೆದ್ದಿಯ ಸಂಪ್ರದಾಯಸ್ಥರಿರಬಹುದೆಂದು ಅಂದಾಜು ಮಾಡಲಾಗಿದೆ. ಇಡೀ ಕರ್ನಾಟಕದಲ್ಲಿ ಎಂಟುಸಾವಿರಕ್ಕೂ ಹೆಚ್ಚಿಗೆ ಈ ಸಂಪ್ರದಾಯದವರು ಇರುವರೆಂದು ತಿಳಿದು ಬಂದಿದೆ.

ಶ್ರಮಿಸಿದರು. ಹರಿಜನರು ಹೊಸ ಬದುಕಿಗೆ ಮಾನಸಿಕವಾಗಿ ಸಿದ್ಧರಾಗುವಂತೆ ಅವರಿಗೆ ಉಪದೇಶ ನೀಡಿದರು.

ಸಾತ್ವಿಕ ಜೀವನವನ್ನು ಲಿಂಗಧಾರಿಗಳಾದವರು ನಡೆಸಬೇಕೆಂಬುದು ಶಿವಯೋಗಿ ಸ್ವಾಮಿಗಳ ಆಶಯ. ಮನುಷ್ಯನಲ್ಲಿ ಅಂತರ್ಗತವಾಗಿರುವ ಅಸುರೀ ಶಕ್ತಿಗಳನ್ನು ಮದ್ಯ ಮಾಂಸಗಳು ಉತ್ತೇಜಿಸುತ್ತವೆಯಾದ ಕಾರಣ ಅದನ್ನು ಕಟ್ಟುನಿಟ್ಟಾಗಿ ವರ್ಜಿಸಬೇಕೆಂದು ಹೊಸದಾಗಿ ಲಿಂಗವಂತರಾದವರಿಗೆ ಅವರು ಬೋಧಿಸುತ್ತಿದ್ದರು. ಒಮ್ಮೆ ಅವರು ಹಳ್ಳಿಯೊಂದರಲ್ಲಿ ಕುರಿ ಕತ್ತರಿಸುವವರ ಮನಸ್ಸನ್ನು ಪರಿವರ್ತಿಸಲು ಪ್ರಯತ್ನಿಸಿದ ಪ್ರಸಂಗ ಸ್ವಾರಸ್ಯಕರವಾಗಿದೆ. ಶಿವಯೋಗಿಸ್ವಾಮಿಗಳು ಎಷ್ಟು ಬಗೆಯಲ್ಲಿ ಉಪದೇಶಿಸಿದರೂ ಕಟುಕರ ಮನಸ್ಸು ಬದಲಾಗಲಿಲ್ಲ. ಆದರೆ ಅವರು ನಿರಾಶರಾಗಲಿಲ್ಲ. ತಮ್ಮ ತಲೆಯನ್ನೇ ಕಡಿಯುವಂತೆ ಅದನ್ನು ಚಾಚಿ ಕುಳಿತುಬಿಟ್ಟರು. ಕಟುಕರ ಮನ ಕರಗಿತು. ಅವರ ಅಂತರಂಗವನ್ನು ಗೆದ್ದ ಶಿವಯೋಗಿಸ್ವಾಮಿಗಳು ಪ್ರಾಣಹಿಂಸೆ ಮಾಡಬೇಡಿರೆಂದು ಅವರಿಗೆ ಉಪದೇಶನೀಡಿ, ಲಿಂಗಧಾರಣೆ ಮಾಡಿದರು.

ಹರಿಜನರಿಗೆ ಲಿಂಗ ಧರಿಸುವುದು ಆ ಕಾಲಕ್ಕೆ ಸಂಪ್ರದಾಯವಾದಿಗಳಿಗೆ ಉದ್ಧಟತನವೆನ್ನಿಸಿತು. ಸಂಪ್ರದಾಯಶರಣರೂ, ಉಗ್ರಧರ್ಮನಿಷ್ಠರೂ, ಸಮಯಾಭಿಮಾನಿಗಳೂ ಆದ ಕೆಲವರು (ವೀರಶೈವರು) ಇದನ್ನು ಕಂಡು ಕೆರಳಿದರು. ತಮ್ಮ ಅಸಹನೆಯನ್ನು ಶಿವಯೋಗಿಸ್ವಾಮಿಗಳ ಮೈಮೇಲಿನ ಇಷ್ಟಲಿಂಗವನ್ನು ಕಿತ್ತುಕೊಳ್ಳುವುದರ ಮೂಲಕ ಪ್ರಕಟಪಡಿಸಿದರು. ಶಿವಯೋಗಿಸ್ವಾಮಿಗಳು ಇಷ್ಟಲಿಂಗ ಬರುವವರೆವಿಗೂ ಅನ್ನ ಆಹಾರಾದಿಗಳನ್ನು ಸ್ವೀಕರಿಸುವುದಿಲ್ಲವೆಂದು ಪಣತೊಟ್ಟು ಕುಳಿತರು. ಮೂರು ದಿವಸ ಅವರು ಏನನ್ನೂ ತೆಗೆದುಕೊಳ್ಳಲಿಲ್ಲ. ಶಿವಯೋಗಿಸ್ವಾಮಿಗಳು ತಂಗಿದ್ದಲ್ಲಿಗೆ ಹಳ್ಳಿಯ ಪ್ರಮುಖರು ಬಂದು ಲಿಂಗವನ್ನೊಪ್ಪಿಸಿ ಆದ ತಪ್ಪನ್ನು ಮರೆತುಬಿಡುವಂತೆ ಕೇಳಿಕೊಂಡ ಮೇಲೆ ಸ್ವಾಮಿಗಳು ಸ್ನಾನಮಾಡಿ ಶಿವಪೂಜಾ ನಂತರ ಪ್ರಸಾದ ಸ್ವೀಕರಿಸಿದರು.2

ಹರಿಜನರಿಗೆ ಲಿಂಗಧಾರಣೆ ಮಾಡಲು ಬಂದವರನ್ನು ಸಮಯಾಭಿಮಾನಿಗಳು ಉಗ್ರವಾಗಿ ಶಿಕ್ಷಿಸಿದ ಪ್ರಸಂಗಗಳೂ ಉಂಟು. ಹೆಗ್ಗಡದೇವನಕೋಟೆಯ ಬಸವಪ್ಪ ಸ್ವಾಮಿಗಳು ಹಳ್ಳಿಯೊಂದರಲ್ಲಿ ಹರಿಜನರಿಗೆ ಲಿಂಗಧಾರಣೆ ಮಾಡಿ ಅಂದಿನ ಪ್ರಸಾದದ ಸಿದ್ಧತೆಗೆ ಭಿಕ್ಷಕ್ಕೆಂದು ಹೋಗಿದ್ದಾಗ ಅವರನ್ನು ಸಂಪ್ರದಾಯನಿಷ್ಠರು ಬಂಧಿಸಿ ನಿರ್ವಸ್ತ್ರರನ್ನಾಗಿ ಮಾಡಿ ಕಂಬಕ್ಕೆ ಕಟ್ಟಿ ಬಾಸುಂಡೆ ಬರುವಂತೆ ಬಾರುಕೋಲಿನಿಂದ ಹೊಡೆದರು.

2. ಈ ಘಟನೆ ನಡೆದದ್ದು ಚಾಮರಾಜನಗರ ತಾಲ್ಲೂಕಿನ ಒಂದು ಹಳ್ಳಿಯಲ್ಲಿ.

ಹರಿಜನರು ಲಿಂಗಧಾರಣೆ ಹೊಂದುವುದಷ್ಟೇ ಅಲ್ಲದೆ, ಮಠ ಕಟ್ಟುವ ಕಾರ್ಯದಲ್ಲೂ ತೊಡಗಿದಾಗ ಅದನ್ನು ನೋಡಿ ಸಹಿಸದ ವೀರಶೈವ ದುರಭಿಮಾನಿಗಳು ವಿನಾಶ ಕಾರ್ಯದತ್ತ ಸರಿದದ್ದೂ ಉಂಟು. ಟಿ. ನರಸೀಪುರ ತಾಲ್ಲೂಕಿಗೆ ಸೇರಿದ ಮುಡುಕುತೊರೆಯಲ್ಲಿ ಮುದ್ದುಮಾದಪ್ಪಸ್ವಾಮಿಗಳು ಮಠದ ನಿರ್ಮಾಣ ಕಾರ್ಯದಲ್ಲಿ ತೊಡಗಿದಾಗ ಹಲವರು ಅದಕ್ಕೆ ಅಡ್ಡಿಯನ್ನುಂಟುಮಾಡಲು ಯತ್ನಿಸಿದರು. ಮುದ್ದುಮಾದಪ್ಪಸ್ವಾಮಿಗಳು ಬಹಳ ಕಷ್ಟ ನಷ್ಟ ಅನುಭವಿಸಬೇಕಾಯಿತು. ಮಠದ ನಿರ್ಮಾಣ ಯೋಜನೆಗೆ ಕಲ್ಲುಹಾಕಲು ತೀರ್ಮಾನಿಸಿದ ಉಗ್ರಮತಾಭಿಮಾನಿಗಳು ಮುದ್ದುಮಾದಪ್ಪ ಸ್ವಾಮಿಗಳು ಬತ್ತ ತುಂಬಿದ್ದ ಗುಡಿಸಲಿಗೆ ಅವರಿಲ್ಲದ ವೇಳೆಯಲ್ಲಿ ಬೆಂಕಿಯಿಟ್ಟರು.

ಹೀಗೆ ಉಚ್ಚವರ್ಣೀಯರಿಂದ ಪ್ರತಿಭಟನೆ, ಹಿಂಸೆ, ವಿನಾಶಕಾರ್ಯಗಳು ನಡೆದರೂ ತಾಳ್ಮೆಗೆಡದೆ ಶಿವಯೋಗಿಸ್ವಾಮಿಗಳು ಹಾಗೂ ಅವರ ಶಿಷ್ಯರು ಹರಿಜನರ ಸುಧಾರಣೆಗೆ ಯತ್ನಿಸಿದರು. ಅವರನ್ನು ಸತ್ಪಥದಲ್ಲಿ ನಡೆಸಲು ಅವರಿಗೆ ಲಿಂಗಧಾರಣೆ ಮಾಡಿ ಸದಾಚಾರ ಸದ್ವರ್ತನೆಗಳನ್ನು ಬೋಧಿಸಿದರು. ಶಿವಯೋಗಿಸ್ವಾಮಿಗಳು ದೈವಾಂಶ ಸಂಭೂತರೆಂದೇ ಅವರ ಭಕ್ತರು ಭಾವಿಸಿರುವರು. ಇವರ ತೇಜಃಪುಂಜ ನಿಲುವನ್ನು ಕಂಡ ಬಾಳೆಹೊನ್ನೂರಿನ ಶಿವಾನಂದ ರಾಜೇಂದ್ರಸ್ವಾಮಿಗಳು ಇವರಿಗೆ ಪ್ರತ್ಯಕ್ಷ ಲಿಂಗಧಾರಣೆ ಮಾಡಿದರೆಂಬ ಪ್ರತೀತಿಯಿದೆ.3 ಶಿವಯೋಗಿಸ್ವಾಮಿಗಳು ಸಿದ್ಧಪುರುಷರು. ೨೮-೬-೧೯೪೭ರಲ್ಲಿ ಅವರು ಲಿಂಗೈಕ್ಯರಾದಾಗ ಭಕ್ತರು ಅಪಾರ ಸಂಖ್ಯೆಯಲ್ಲಿ ನೆರೆದು ಮೈಸೂರಿನ ಗಾಂಧಿನಗರದಲ್ಲಿರುವ ಮನೆಮಂಚಮ್ಮನ ದೇವಸ್ಥಾನದಲ್ಲಿ ವಿಧ್ಯುಕ್ತವಾಗಿ ಸಮಾಧಿ ಮಾಡಿದರು. ಇಂದು ಶಿವಯೋಗಿಸ್ವಾಮಿಗಳ ಸಮಾಧಿ ಭಕ್ತರಿಗೆ ಒಂದು ಜಾಗೃತಸ್ಥಾನವಾಗಿದೆ. ತಮ್ಮ ಇಷ್ಟಾರ್ಥಗಳ ಪೂರೈಕೆಗಾಗಿ ಭಕ್ತರು ಇಲ್ಲಿಗೆ ಬಂದು ಸೇವೆ ಸಲ್ಲಿಸುತ್ತಿರುವರು. ಸಮಾಧಿಯ ದರ್ಶನಕ್ಕೆ ಬರುವ ಭಕ್ತರ ಅನುಕೂಲಕ್ಕೆಂದು ನೆಲಮಾಳಿಗೆಗೆ ಮೆಟ್ಟಿಲು ಕಟ್ಟಲಾಗಿದೆ. ಸಮಾಧಿಯ ಮೇಲೆ ದೇವಾಲಯ ನಿರ್ಮಾಣಮಾಡಿ. ಸ್ಥಾವರಲಿಂಗ ಸ್ಥಾಪನೆಮಾಡಿ, ನಿತ್ಯಪೂಜೆಗೆ ವ್ಯವಸ್ಥೆ ಮಾಡಲಾಗಿದೆ.4 ಶಿವಯೋಗಿಸ್ವಾಮಿಗಳು ಮಹಿಮಾಪುರುಷರೆಂಬುದನ್ನು

---

3. ಮೈಸೂರಿನ ಗಾಂಧಿನಗರದಲ್ಲಿರುವ ಶಿವಯೋಗಿಸ್ವಾಮಿಗಳ ಆಶ್ರಮವನ್ನು ಶ್ರೀಮದ್ರಂಭಾಪುರಿ ಮಹಾಶಾಖೆ ರೇಣುಕಾಪೀಠ ಶ್ರೀ ಉರಿಲಿಂಗಪೆದ್ದೇಶ್ವರ ಸಂಸ್ಥಾನಮಠ ಎಂದು ಕರೆದಿರುವುದು ಗಮನೀಯ ವಿಷಯವಾಗಿದೆ.
4. ಶಿವಯೋಗಿಸ್ವಾಮಿಗಳು ಕೊರಳಿ ಮಠದ ಪೀಠಾಧಿಕಾರಿಗಳಾಗಿದ್ದರೂ ಮೈಸೂರು ಹಾಗೂ ಅದರ ಸುತ್ತ ಮುತ್ತಲ ಭಾಗಗಳೊಡನೆ ಹೆಚ್ಚಿನ ಬಾಂಧವ್ಯ ಬೆಳೆಸಿಕೊಂಡಿದ್ದರು. ಹೆಚ್ಚುಕಾಲ ಇಲ್ಲಿಯೇ ಸಂಚಾರ ಕೈಗೊಂಡು ಸುಧಾರಣಾಕಾರ್ಯ ಮಾಡಿದರು. ಶಿವಯೋಗಿಸ್ವಾಮಿಗಳು ಬದುಕಿದ್ದಾಗಲೇ ಕೊರಳಿಯ ಮಠಕ್ಕೆ

ತಿಳಿಸುವ ಕಥೆಯೊಂದು ಪ್ರತೀತಿಯಲ್ಲಿದೆ. ಶಿವಯೋಗಿಸ್ವಾಮಿಗಳು ತಮ್ಮ ಶಿಷ್ಯರಾದ ಮುದ್ದುಮಾದಪ್ಪ ಸ್ವಾಮಿಗಳ ಕನಸಿನಲ್ಲಿ ಬಂದು ತಮಗೆ ಸರಿಯಾದ ರೀತಿಯಲ್ಲಿ ಕ್ರಿಯಾ ಸಮಾಧಿಯಾಗಿಲ್ಲವೆಂದು ಹೇಳಿಕೊಂಡದ್ದರಿಂದ ಮುದ್ದುಮಾದಪ್ಪಸ್ವಾಮಿಗಳು ಹಾಗೂ ಶಿವಯೋಗಸ್ವಾಮಿಗಳ ಭಕ್ತಾದಿಗಳು ಅವರು ಸಮಾಧಿಗೊಂಡ ೭ ವರುಷ ೯ ತಿಂಗಳ ನಂತರ ಸಮಾಧಿಯನ್ನು ಬಿಚ್ಚಿಹಾಕಿಸಿದರು. ಆಶ್ಚರ್ಯವೆಂದರೆ, ಸಮಾಧಿ ಮಾಡಿದಾಗ ಪದ್ಮಾಸನದಲ್ಲಿ ಶಿವಯೋಗಿಸ್ವಾಮಿಗಳನ್ನು ಕೂರಿಸಿ ಕೊರಳು ಬಾಗದಿರಲಿ ಎಂದು ದಂಡವೊಂದನ್ನು ಆಸರೆಕೊಟ್ಟಿದ್ದುದು, ಬೇರೆಯಾಗಿ ತೆಗೆದಿಡಲಾಗಿತ್ತು ; ದೇಹದ ಮೇಲೆ ಧರಿಸಿದ್ದ ಹೂವು ಆಗ ತಾನೆ ಧರಿಸಿದಂತಿತ್ತು !

ಉರಿಲಿಂಗಪೆದ್ದಿಯ ಮಠಗಳು ಮೈಸೂರು ಭಾಗದಲ್ಲಿ ಮೈಸೂರಿನ ಗಾಂಧಿ ನಗರ, ಕೊಳ್ಳೇಗಾಲ ತಾಲ್ಲೂಕಿನ ಮಣಗಳ್ಳಿ ಹಾಗೂ ಟಿ. ನರಸೀಪುರ ತಾಲ್ಲೂಕಿನ ಮುಡುಕುತೊರೆಯಲ್ಲಿ ಇವೆ. ಶಿವಯೋಗಿಸ್ವಾಮಿಗಳ ಗದ್ದುಗೆಯು ಮೈಸೂರಿನ ಗಾಂಧಿನಗರದ ಮುನೆಮಂಚಮ್ಮ ದೇವಸ್ಥಾನದಲ್ಲಿದ್ದು, ಇದರ ಸಮೀಪದಲ್ಲೇ ಶಿವಯೋಗಿಸ್ವಾಮಿಗಳವರ ಆಶ್ರಮವಿದೆ. ಮಠದ ಸ್ಥಾಪನೆ ೩೧–೭–೧೯೫೫ ರಲ್ಲಿ ಆದಂತೆ ತಿಳಿದು ಬರುತ್ತದೆ. ಇದರ ಆರಂಭೋತ್ಸವವನ್ನು ಸುತ್ತೂರು ಮಹಾಸ್ವಾಮಿಗಳು ಮಾಡಿದರು. ಮಠ ಸಾಧಾರಣವಾಗಿದೆ. ಮೇಲುವರ್ಗದವರ ಮಠಗಳಂತೆ ಜರ್ಬಾಗಿ ಇಲ್ಲ. ಮಠಕ್ಕೆ ಸೇರಿದಂತೆ ವಿಶಾಲವಾದ ಜಾಗವಿದೆ. ಅಲ್ಲಿ ಪುಟ್ಟ ತೋಟ ಬೆಳೆಸಲಾಗಿದೆ. ಮಠಕ್ಕೆ ಇದಲ್ಲದೆ ಬೇರಾವ ಆಸ್ತಿಯೂ ಇಲ್ಲ. ಮಠದ ಸುತ್ತ ಮುತ್ತ ಹರಿಜನರೇ ಪ್ರಧಾನವಾಗಿ ವಾಸಿಸುತ್ತಿರುವರು. ಅವರೇ ಮಠದ ಭಕ್ತಾದಿಗಳು. ಈ ಮಠಕ್ಕೆ ಸಿದ್ದಪ್ಪಸ್ವಾಮಿಗಳು ೧೯೫೭ರಲ್ಲಿ ಪಟ್ಟಾಭಿಷಿಕ್ತರಾದರು. ಸಿದ್ದಪ್ಪಸ್ವಾಮಿಗಳಿಗೆ ಅಧಿಕಾರ ಸ್ವೀಕರಿಸುವ ಮುನ್ನ, ಅಂದರೆ, ಏಳೆಂಟು ತಿಂಗಳ ಪೂರ್ವದಲ್ಲಿಯೇ ಲಿಂಗಧಾರಣೆಯಾಯಿತು. ಸಿದ್ದಪ್ಪಸ್ವಾಮಿಗಳು ರಾಜಯೋಗಿಗಳು. ಗೃಹಸ್ಥರಾದ ಇವರಿಗೆ ಪತ್ನಿ ಹಾಗೂ ೩೩ ವರ್ಷದ ಮಗಳು, ೩೦ ವರ್ಷದ ಮಗ ಇದ್ದಾರೆ. ಮಗಳು, ಮಗ ವಿವಾಹವಾಗಿ ಬೇರೆ ಇದ್ದಾರೆ. ಸಿದ್ದಪ್ಪಸ್ವಾಮಿಗಳೊಂದಿಗೆ ಈಗ ಅವರ ಪತ್ನಿ ಮಾತ್ರ ಮಠದಲ್ಲಿದ್ದಾರೆ. ಅವರು ಅಧಿಕಾರ ಸ್ವೀಕರಿಸಿದಂದಿನಿಂದ ಪತಿ–ಪತ್ನಿ ಭಾವವನ್ನು ತ್ಯಜಿಸಿ ಇಬ್ಬರೂ ಕಾಷಾಯ ವಸ್ತ್ರಧಾರಿಗಳಾಗಿ

---

ಗುರುಲಿಂಗಸ್ವಾಮಿಗಳನ್ನು ಉತ್ತರಾಧಿಕಾರಿಯಾಗಿ ನೇಮಿಸಿದ್ದರು. ಅವರ ಕಾಲಕ್ಕೇ ಗುರುಲಿಂಗಸ್ವಾಮಿಗಳು ಲಿಂಗೈಕ್ಯರಾದ್ದರಿಂದ ಮಹದೇವಸ್ವಾಮಿಗಳಿಗೆ ಅಧಿಕಾರ ವಹಿಸಿಕೊಡಲಾಯಿತು. ಮಹದೇವಸ್ವಾಮಿಗಳೂ ತಮ್ಮ ಗುರುಗಳಂತೆ ವಿರಕ್ತರು ; ಸದಾಚಾರ ಸತ್‌ಶೀಲ ಸಂಪನ್ನರು ; ಉನ್ನತ ಶಿಕ್ಷಣದಿಂದ ಪಕ್ವಗೊಂಡ ಮನ-ಬುದ್ಧಿಯುಳ್ಳವರು. ಇವರೂ ಶಿವಯೋಗಿಸ್ವಾಮಿಗಳಂತೆ ಮೈಸೂರು ಭಾಗದೊಡನೆ ಸಂಪರ್ಕವಿಟ್ಟುಕೊಂಡಿರುವರು.

ಗುರು–ಶಿಷ್ಯ ಭಾವದಲ್ಲಿ ವ್ಯವಹರಿಸುತ್ತಿರುವರು. ಸಿದ್ದಪ್ಪಸ್ವಾಮಿಗಳು ಮೈಸೂರಿನ ಗಂಗಾಧರಸ್ವಾಮಿಗಳ ಬಳಿ ಪೌರೋಹಿತ್ಯ ಕಲಿತರಂತೆ. ಇಲ್ಲಿಯವರೆವಿಗೆ ಸುಮಾರು ೩೦೦–೪೦೦ ಮಂದಿಗೆ ಲಿಂಗಧಾರಣೆ ಮಾಡಿರುವರು. ಮೈಸೂರಿನ ಗಾಂಧಿನಗರದ ಲಿಂಗವಂತ ಹರಿಜನರ ಹಾಗೂ ಮೈಸೂರಿನ ಸುತ್ತಮುತ್ತಲಿನ ಹರಿಜನರ ಮನೆಗಳಲ್ಲಿ ಯಾವುದೇ ಶುಭಾಶುಭ ಕಾರ್ಯಗಳು ಜರುಗಿದರೂ ಇವರಿಗೆ ಕರೆ ಬರುತ್ತದೆ. ಲಿಂಗ ವಂತ ಹರಿಜನರ ಮನೆಯಲ್ಲಿ ಕಂತೆಭಿಕ್ಷಕ್ಕೆ[5] ಸಿದ್ದಪ್ಪಸ್ವಾಮಿಗಳ ಪತ್ನಿ ಹೋಗುವರು. ವರ್ಷಕ್ಕೆ ಆಗುವಷ್ಟು ಅಕ್ಕಿ, ರಾಗಿಹಿಟ್ಟು, ಕಾಯಿ, ಬೆಲ್ಲ ಇತ್ಯಾದಿಗಳನ್ನು ಪಡೆಯಲು ಆಗಾಗ್ಗ 'ಭಿಕ್ಷೆ'ಗೆ ಹೋಗುವುದೂ ಉಂಟು. (ನಾವು ಮಠಕ್ಕೆ ಭೇಟಿಕೊಟ್ಟಾಗ ಈ ರೀತಿಯ ಭಿಕ್ಷೆಗೆ ಸಿದ್ದಪ್ಪಸ್ವಾಮಿಗಳ ಪತ್ನಿ ಹೊರಟಿದ್ದರು. ಹೊರಡುವ ಮುನ್ನ ಗುರುಗಳಿಗೆ ಅಡ್ಡಬಿದ್ದರು. ಗುರುಗಳು ಆಶೀರ್ವದಿಸಿ, ಜೋಳಿಗೆಗೆ ಹೂವು, ವಿಭೂತಿಗಟ್ಟಿ ಹಾಕಿದರು.) ಈ ರೀತಿಯ ಭಿಕ್ಷೆ ಹಿಂದೂಗಳ ಮನೆಯಲ್ಲಿ ಮಾತ್ರ ಪಡೆಯುವ ನಿಯಮ. ಹಿಂದೂಗಳ ಮನೆಯ ಮುಂದೆ ಹೋಗಿ ಗಂಟೆಯ ಧ್ವನಿಮಾಡಿ 'ಭವತಿ ಭಿಕ್ಷಾಂ ದೇಹಿ' ಎಂದಾಗ ಮನೆಯವರು ಅಕ್ಕಿ, ಬೇಳೆ, ಬೆಲ್ಲ–ಇತ್ಯಾದಿಗಳಲ್ಲಿ ಏನನ್ನಾದರೂ ಜೋಳಿಗೆಗೆ ಹಾಕುವರು. ಭಿಕ್ಷೆ ಹಾಕಲು ಬಂದವರ ಹಣೆಗೆ ವಿಭೂತಿ ಹಚ್ಚಿ ಕೈಗೆ ಪುಷ್ಪವನ್ನು ಕೊಡಲಾಗುವುದು. ಸಿದ್ದಪ್ಪಸ್ವಾಮಿಗಳು ಹಾಗೂ ಅವರ ಪತ್ನಿಗೆ ಗಾಂಧಿನಗರದ ಲಿಂಗವಂತ ಹರಿಜನರು ಭಯಭಕ್ತಿಗಳಿಂದ ನಡೆದುಕೊಳ್ಳುವರು. ಮಠಕ್ಕೆ ದಿನಕ್ಕೆ ಒಮ್ಮೆ ಭೇಟಿಕೊಟ್ಟು ನಮಸ್ಕರಿಸಿ ಅವರ ಆಶೀರ್ವಾದ ಪಡೆಯುವರು.

ಶಿವಾನಂದಸ್ವಾಮಿಗಳು ಕೊಳ್ಳೇಗಾಲ ತಾಲ್ಲೂಕಿನಲ್ಲಿ ಸಂಚಾರ ಕೈಗೊಂಡಾಗ ಭಕ್ತಾದಿಗಳ ಅನುಕೂಲಕ್ಕಾಗಿ ಆಶ್ರಮವೊಂದನ್ನು ಮಣಗಳ್ಳಿಯಲ್ಲಿ[6] ಸ್ಥಾಪಿಸಿದರು. ಅವರ ನಂತರ ಶಿವಯೋಗಿಸ್ವಾಮಿಗಳ ಶಿಷ್ಯರಾದ ಮುದ್ದುಮಾದಪ್ಪಸ್ವಾಮಿಗಳು ಉತ್ತರಾಧಿಕಾರಿಗಳಾದರು. ಇವರು ಕೊಳ್ಳೇಗಾಲಕ್ಕೆ ೬ ಮೈಲಿ ದೂರದಲ್ಲಿರುವ

---

5. ಕಂತೆಭಿಕ್ಷವು ಲಿಂಗವಂತ ಹರಿಜನರ ಮನೆಯಲ್ಲಿ ನಿತ್ಯವೂ ಹೋಗಿ ಪಡೆಯುವ ಪ್ರಸಾದ. ಇದನ್ನು ಸಿದ್ದಪ್ಪಸ್ವಾಮಿಗಳು ಹಾಗೂ ಅವರ ಪತ್ನಿ ಸ್ವೀಕರಿಸುವರು. ಮಠಕ್ಕೆ ಬಂದವರಿಗೂ ಈ ಪ್ರಸಾದ ವಿನಿಯೋಗ ಮಾಡುವರು.
   ಕಂತೆಭಿಕ್ಷೆ ಪದ್ಧತಿ ಈಗಲೂ ಮೈಸೂರಿನ ಸುತ್ತಮುತ್ತಣ ಪ್ರದೇಶದಲ್ಲಿ ಬಳಕೆಯಲ್ಲಿದೆ. ಹೆಚ್ಚಿನ ಆದಾಯವಿಲ್ಲದ ಅನೇಕ ವೀರಶೈವ ಮಠಗಳ ಗುರುಗಳು ಭಕ್ತಾದಿಗಳ ಮನೆಗೆ ನಿತ್ಯವೂ ನಿಶ್ಚಿತವೇಳೆಯಲ್ಲಿ ಹೋಗಿ ಪ್ರಸಾದ ತರುವ ಪರಿಪಾಠ ಬೆಳೆಸಿಕೊಂಡಿರುವರು.
6. ಇದು ಕೊಳ್ಳೇಗಾಲ ತಾಲ್ಲೂಕಿಗೆ ಸೇರಿದ ಹನೂರಿಗೆ ೭ ಮೈಲಿ ದೂರದಲ್ಲಿದೆ. ಮಣಗಳ್ಳಿಗೆ ಸೇರಿದಂತೆ ಇರುವ ಹೊಲ-ಗದ್ದೆಗಳ ನಡುವೆ ಆಶ್ರಮವಿದೆ. ಆಶ್ರಮ ಭಾಗವನ್ನು 'ಗುರುಗಳ ದೊಡ್ಡಿ' ಎಂದು ಊರವರು ಕರೆಯುವರು.

ಸತ್ತೇಗಾಲದವರು, ಮೂಲತಃ ಹರಿಜನರು. ಇವರಿಗೆ ಬಾಲ್ಯದಿಂದಲೂ ವೈರಾಗ್ಯದ ಕಡೆಗೇ ಒಲವು. ಇವರ ಕೂಡ ಹುಟ್ಟಿದವರು ಏಳುಮಂದಿ ಇರುವರು. ಇವರಾರೂ ಲಿಂಗವಂತರಾಗಲಿಲ್ಲ. ಆದರೆ ಇವರೊಬ್ಬರು ಮಾತ್ರ ಲಿಂಗದೀಕ್ಷೆಗೆ ಆಸೆಪಟ್ಟು ಕೊಳ್ಳೇಗಾಲ ತಾಲ್ಲೂಕು ಕುಣಗಳ್ಳಿ ಗ್ರಾಮ ಆದಿಗದ್ದುಗೆ ಮುನಿಮಠದ ಶ್ರೀ ಗುರು ನಂಜಪ್ಪಸ್ವಾಮಿಗಳಿಂದ ದೀಕ್ಷೆ ಪಡೆದರು. ದೀಕ್ಷಾನಂತರ ಮನೆಯನ್ನು ತೊರೆದು ಶಿವಯೋಗಿಸ್ವಾಮಿ ಹಾಗೂ ಶಿವಾನಂದಸ್ವಾಮಿಗಳ ಜೊತೆ ಸೇರಿಕೊಂಡು ಮೈಸೂರು ಭಾಗದಲ್ಲಿ ಹರಿಜನರಲ್ಲಿ ಜಾಗೃತಿಯಾಗುವಂತೆ ದುಡಿದರು. ಲಿಂಗವಂತ ಹರಿಜನರಲ್ಲಿ ಇವರ ಹೆಸರು ಮನೆಮಾತಾಗಿದೆ. ವಿರಕ್ತರಾದ ಇವರು ಮೈಸೂರು, ಮಂಡ್ಯ ಜಿಲ್ಲೆಗಳಲ್ಲಿ ಹೆಚ್ಚಾಗಿ ಸಂಚರಿಸಿ ಯೋಗ್ಯರಾದವರಿಗೆ ಲಿಂಗದೀಕ್ಷೆ ಮಾಡಿರುವರು. ಮೈಸೂರು ಭಾಗದಲ್ಲಿ ಉರಿಲಿಂಗಪೆದ್ದಿ ಸಂಪ್ರದಾಯದವರು ಹೆಚ್ಚಿನ ಸಂಖ್ಯೆಯಲ್ಲಿ ಹರಡಲು ಇವರು ಶಿವಯೋಗಿಸ್ವಾಮಿಗಳಷ್ಟೇ ಕಾರಣರು. ಮಣಗಳ್ಳಿಯ ಶಿವಾನಂದಾಶ್ರಮಕ್ಕೆ ಹಾಗೂ ಮುಡುಕುತೊರೆಯ ಮಲ್ಲಿಕಾರ್ಜುನ ಮಠಕ್ಕೆ ಇವರೇ ಅಧಿಕಾರಿಗಳು. ಮುಡುಕುತೊರೆಯಲ್ಲಿ ಹೆಚ್ಚು ಕಾಲ ತಂಗಬೇಕಾಗಿರುವುದರಿಂದ, ಆಗಾಗ್ಗೆ ಮಣಗಳ್ಳಿಯ ಶಿವಾನಂದಾಶ್ರಮಕ್ಕೆ ಭೇಟಿ ಕೊಡುವರು. ಶಿವಾನಂದಾಶ್ರಮಕ್ಕೆ ಹದಿನಾರು ಎಕರೆ ಭೂಮಿ ಇದೆ. ಭಕ್ತಾದಿಗಳು ಈ ಭೂಮಿ ನೋಡಿಕೊಳ್ಳುತ್ತಿರುವರು. ಬಾಳೆ, ತೆಂಗು ಹಾಕಿಸಿರುವರು. ಬಾವಿ ತೋಡಿಸಿ ಒಳ್ಳೆಯ ಬೆಳೆ ತೆಗೆಯುತ್ತಿರುವರು. (ನಾವು ಶಿವಾನಂದಾಶ್ರಮಕ್ಕೆ ಭೇಟಿಕೊಟ್ಟಾಗ ಮುದ್ದುಮಾದಪ್ಪಸ್ವಾಮಿಗಳು ತೋಟದಲ್ಲಿ ದುಡಿಯುತ್ತಿದ್ದರು. 'ಮೈಮುರಿದು ದುಡಿದು ತಿನ್ನಬೇಕು, ಕಾವಿ ಧರಿಸಿದ ಸ್ವಾಮಿಯಾದರೂ ದುಡಿಯದೆ ತಿನ್ನಬಾರದು'ಎನ್ನುವ ಸಿದ್ಧಾಂತ ಇವರದು.)ವಯಸ್ಸು ಅರವತ್ತು ದಾಟಿದ್ದರೂ ಮುದ್ದುಮಾದಪ್ಪಸ್ವಾಮಿಗಳು ಗಟ್ಟಿಮುಟ್ಟಾಗಿರುವರು. ಸದಾ ಕಾರ್ಯಮಗ್ನರಾಗಿರುವರು. ಮುಡುಕುತೊರೆಯಲ್ಲಿ ಒಂದು ಮಾಧ್ಯಮಿಕ ಶಾಲೆ ಹಾಗೂ ಒಂದು ವಿದ್ಯಾರ್ಥಿನಿಲಯ (೧೯೪೫-೪೬ರಿಂದ) ನಡೆಸಿಕೊಂಡು ಬರುತ್ತಿರುವರು. (ಇವುಗಳಿಗೆ ಸವರ್ಣೀಯರು ಬರದಿರುವುದು ವ್ಯಸನಕರ.) ಲಿಂಗವಂತ ಹರಿಜನರ ಸಂಘಟನೆಯಾಗಬೇಕು. ಹೆಚ್ಚು ಹೆಚ್ಚು ವಿದ್ಯಾವಂತರಾಗಬೇಕು. ಧರ್ಮದಲ್ಲಿ ಆಸಕ್ತಿ ಬೆಳೆಸಿಕೊಳ್ಳಬೇಕು. ಒಳ್ಳೆಯ ನಡತೆ ಆಚಾರಗಳನ್ನು ರೂಢಿಸಿಕೊಳ್ಳಬೇಕು ಎಂಬುದು ಇವರ ಹಂಬಲ. ಮುಡುಕುತೊರೆ ಜಾತ್ರೆಯ ವೇಳೆಯಲ್ಲಿ ಹಾಗೂ ಪರ್ವತ ಪರುಷೆಯ ಸಂದರ್ಭದಲ್ಲಿ ಅಲ್ಲಿಗೆ ಮೈಸೂರಿನ ನಾನಾ ಭಾಗಗಳಿಂದ ಬರುವ ಲಿಂಗವಂತ ಹರಿಜನರನ್ನೆಲ್ಲಾ ತಮ್ಮ ಮಠದಲ್ಲಿ ಕಲೆಹಾಕಿ ಅವರಲ್ಲಿ ಸುಧಾರಣೆ ತರಲು ಇವರು ಶ್ರಮಿಸುತ್ತಿರುವರು. ಮೈಸೂರಿನಲ್ಲಿ ಪ್ರತಿವರ್ಷ ಜುಲೈ ತಿಂಗಳಲ್ಲಿ ಶಿವಯೋಗಿಸ್ವಾಮಿಗಳ ಆರಾಧನಾ ಮಹೋತ್ಸವವನ್ನು ಇವರು ತಪ್ಪದೆ ನಡೆಸುತ್ತಿರುವರು. ಆ ಮಠಕ್ಕೆ ವಿದ್ವಾಂಸರನ್ನು ಕರೆಯಿಸಿ ಜ್ಞಾನದಾಸೋಹ ನಡೆಯಿಸುವರು. ಆ

ಮೂಲಕ ಶರಣತತ್ತ್ವಗಳನ್ನು ಲಿಂಗವಂತ ಹರಿಜನರಿಗೆ ತಿಳಿಯಪಡಿಸುವರು. ಒಂಬತ್ತು ದಿನಗಳ ಪರ್ಯಂತ ನಡೆಯುವ ಈ ಉತ್ಸವಕ್ಕೆ ಭಕ್ತಾದಿಗಳು ದೂರದ ಸ್ಥಳಗಳಿಂದೆಲ್ಲಾ ಬರುವರು. ಈ ಸಂದರ್ಭದಲ್ಲೇ ಕೊರಳಿಯ ಮಠದ ಪೀಠಾಧಿಕಾರಿಗಳಾದ ಮಹದೇವಸ್ವಾಮಿಗಳೂ ಹಾಜರಿರುವರು. ಅವರೂ ಭಕ್ತಾದಿಗಳಿಗೆ ಸೂಕ್ತ ಉಪದೇಶ ನೀಡುವರು.

ಮೈಸೂರು, ವಣಗಳ್ಳಿ, ಮುಡುಕುತೊರೆಗಳಲ್ಲಿ ಅಲ್ಲದೆ ಬೇರೆಡೆಗಳಲ್ಲೂ ಲಿಂಗವಂತ ಹರಿಜನರು ಮಠಗಳನ್ನು ನಿರ್ಮಿಸಿರಬಹುದು. ಆದರೆ ಅವು ಇವುಗಳಂತೆ ಪ್ರಸಿದ್ಧವಲ್ಲ. ಮುದ್ದುಮಾದಪ್ಪಸ್ವಾಮಿ, ಸಿದ್ದಪ್ಪಸ್ವಾಮಿಗಳಂತೆ ಮೈಸೂರು ಜಿಲ್ಲೆಗೆ ಸೇರಿದ ಕುದೇರಿನ ಬಳಿಯಿರುವ ಎಲಕ್ಕೂರಿನ ಚಂದ್ರಶೇಖರಸ್ವಾಮಿ ; ಕುಣಗಳ್ಳಿ ಬಸಪ್ಪ (ಇವರು ಹೆಗ್ಗಡದೇವನಕೋಟೆ ತಾಲ್ಲೂಕು ಕೋಳಗಾಲದಲ್ಲಿ ವಾಸವಿರುವವರು) ; ಮೈಸೂರು ಸಿಟಿ ಅಶೋಕಪುರಂನ ಚೌಡಪ್ಪಸ್ವಾಮಿ ಇವರುಗಳೂ ಲಿಂಗವಂತ ಹರಿಜನರ ಮನೆಗಳ ಶುಭಾಶುಭ ಕಾರ್ಯಗಳಲ್ಲಿ ಭಾಗವಹಿಸುವರು. ಯೋಗ್ಯರೆಂದು ಕಂಡುಬಂದವರಿಗೆ ಲಿಂಗದೀಕ್ಷೆ ಮಾಡುವರು. ಕುಣಗಳ್ಳಿ ಬಸಪ್ಪ ಹಾಗೂ ಮುದ್ದುಮಾದಪ್ಪಸ್ವಾಮಿಯವರು ಬ್ರಹ್ಮಚಾರಿಗಳಾದರೆ ಎಲಕ್ಕೂರು ಚಂದ್ರಶೇಖರಸ್ವಾಮಿ, ಚೌಡಪ್ಪಸ್ವಾಮಿ ಹಾಗೂ ಸಿದ್ದಪ್ಪಸ್ವಾಮಿಗಳು ಗೃಹಸ್ಥರು. ಕೊನೆಯ ಮೂವರು ಗೃಹಸ್ಥರಾದರೂ ಸನ್ಯಾಸಿಗಳಂತೆ ಇರುವರು. ಕಾಮವಾಸನೆಯನ್ನು ತ್ಯಜಿಸಿರುವರು.

ಹರಿಜನರಿಗೆ ಲಿಂಗಧಾರಣೆ ಮಾಡುವಾಗ ಗುರುವಾದವನು ಶಿಷ್ಯನ ಪೂರ್ವೋತ್ತರಗಳನ್ನು ಸಾಕಷ್ಟು ತಿಳಿದೇ ಲಿಂಗವನ್ನು ಅನುಗ್ರಹಿಸುವನು. ಲಿಂಗಧಾರಣೆಯಿಂದ ತಾವು ಉತ್ತಮರಾಗುವೆವೆಂಬ ಭಾವನೆ ಮನಸ್ಸಿನಲ್ಲಿದ್ದರೂ, ಎಲ್ಲರೂ ಲಿಂಗವಂತರಾಗಲು ಹೊರಟಿಲ್ಲ. ನಮಗೆ ತಿಳಿದಂತೆ ಒಂದು ಕುಟುಂಬದಲ್ಲಿ ಕೆಲವರು ಲಿಂಗವಂತರಾಗಿಯೂ ಹಲವರು ಲಿಂಗವಂತರಾಗದೆಯೂ ಉಳಿದಿರುವುದು ಕಂಡುಬಂದಿದೆ. ಲಿಂಗವಂತರಾದಮೇಲೆ ಲಿಂಗವಂತರಲ್ಲದವರ ಸಂಪರ್ಕವನ್ನು ಸಂಪೂರ್ಣವಾಗಿ ತ್ಯಜಿಸಬೇಕು ; ಊಟೋಪಚಾರ, ಕೊಡು–ಕೊಳ್ಳುವ ವ್ಯವಹಾರ, ಗೃಹಪ್ರವೇಶ–ಇವುಗಳಲ್ಲಿ ಕಟ್ಟುನಿಟ್ಟಾದ ಎಚ್ಚರದಿಂದಿರಬೇಕು. ಲಿಂಗ ಧರಿಸುವುದರಿಂದ ಬಂಧು–ಬಳಗ, ರಕ್ತಸಂಬಂಧ, ಮದ್ಯಮಾಂಸಸೇವನೆ ಎಲ್ಲವನ್ನೂ ಬಿಡಬೇಕಾಗುವುದರಿಂದ ಲಿಂಗಧಾರಣೆಗೆ ಹರಿಜನರು ಹಿಂಜರಿಯುವರು. ಹಿಂದಿನಿಂದ ಬೆಳೆದು ಬಂದ ರೂಢಿಯನ್ನು ಬಿಟ್ಟುಬಿಡಲು ಕೆಲವರ ಮನಸ್ಸು ಸಿದ್ಧವಿರುವುದಿಲ್ಲ. ಲಿಂಗವಂತರಾಗುವುದರಿಂದ ತಮಗೆ ಸರಕಾರದಿಂದ ಸಿಗುವ ಸವಲತ್ತು ಎಲ್ಲಿ ಕೈಬಿಟ್ಟು ಹೋಗುವುದೋ ಎಂಬ ಭಯದಿಂದ ಹಲವರು ಇದಕ್ಕೆ ಒಪ್ಪುವುದಿಲ್ಲ. ಲಿಂಗ ಕಟ್ಟಿಕೊಂಡು ಬಿಟ್ಟರೆ ಉತ್ತಮರ

ಜೊತೆ ಸರಿಸಮನಾಗುವುದು ಎಲ್ಲಿಯಾದರೂ ಸಾಧ್ಯವೆ ? ಎಂಬ ವಾಸ್ತವಸತ್ಯ ಮತ್ತೆ ಕೆಲವರನ್ನು ಹಿಂದೆ ಸರಿಯುವಂತೆ ಮಾಡಿದೆ. ಗುರುಗಳ ಕೃಪಾಕಟಾಕ್ಷ ಎಲ್ಲರಿಗೂ ಲಭ್ಯವಾಗುವಂತಹದಲ್ಲ. ಲಿಂಗದೀಕ್ಷೆಯ ಸಮಾರಂಭಕ್ಕೆ ತಗಲಬಹುದಾದ ಖರ್ಚು ವೆಚ್ಚವನ್ನು ಭರಿಸುವ ಸಾಮರ್ಥ್ಯ ನಿತ್ಯವೂ ದುಡಿದರೆ ಮಾತ್ರ ತುತ್ತಿನಚೀಲ ತುಂಬಲು ಸಾಧ್ಯವಿರುವ ಆರ್ಥಿಕ ಮುಗ್ಗಟ್ಟಿನ ಬಡ ಹರಿಜನರೆಲ್ಲರಿಗೆ ಎಟುಕು ವಂತಹದಲ್ಲ.

ಲಿಂಗಧಾರಣೆಯಾದ ಮೇಲೆ ಲಿಂಗವಂತ ಹರಿಜನರು ತಮ್ಮೆಲ್ಲ ಪೂರ್ವ ಆಚರಣೆ ಗಳನ್ನು ಕೈಬಿಡುವರು. ಅವರಿಗೆ ಮಂತ್ರೋಪದೇಶದ ಮೂಲಕ ಪುನರ್ಜನ್ಮ ಪ್ರಾಪ್ತ ವಾಗುತ್ತದೆ. ಮದ್ಯಸೇವನೆ, ಮಾಂಸಭಕ್ಷಣೆ ಇವೆಲ್ಲವನ್ನೂ ಬಿಡುವರು. ಗುರುವು ತಿಳಿಸಿಕೊಟ್ಟ ಕ್ರಮದಲ್ಲಿ ನಿತ್ಯವೂ ಇಷ್ಟಲಿಂಗಪೂಜೆಯನ್ನು ಶುಚಿರ್ಭೂತರಾಗಿ ಮಾಡು ವರು. ಸತ್ಯಸದಾಚಾರದಲ್ಲಿ ನಡೆಯುವರು. ಹರಿಜನರ ಕೇರಿಯಲ್ಲೇ ವಾಸವಿದ್ದರೂ ತಮ್ಮ ಪೂರ್ವಾಶ್ರಮದ ಬಂಧುಗಳೊಡನೆ ಬೆರೆಯರು, ಉಣ್ಣರು. ಮುಡುಕು ತೊರೆಯಲ್ಲಿ ೨–೫–೧೯೮೧ರಂದು ಮುದ್ದುಮಾದಪ್ಪಸ್ವಾಮಿಗಳು ಹಾಗೂ ಚೌಡಪ್ಪ ಸ್ವಾಮಿಗಳ ನೇತೃತ್ವದಲ್ಲಿ ಬಂಡಳ್ಳಿಯ (ಕೊಳ್ಳೇಗಾಲ ತಾಲ್ಲೂಕು) ಎಸ್. ವೀರಯ್ಯ ನವರ ಮನೆಯ ಹುಡುಗನೊಬ್ಬನಿಗೆ ಲಿಂಗಧಾರಣಕಾರ್ಯ ನೆರವೇರಿತು. (ಈ ಸಂದರ್ಭ ದಲ್ಲಿ ನಾವು ಅಲ್ಲಿಗೆ ಹೋಗಿದ್ದವು). ದೀಕ್ಷೆಗೊಳ್ಳುವ ಹುಡುಗನಿಗೆ ೧೭ ವರುಷ. ಮನೆ ಯಲ್ಲಿ ಎಲ್ಲರಿಗೂ ಲಿಂಗಧಾರಣೆಯಾಗಿದ್ದುದನ್ನು ಕಂಡು ತಾನೂ ಲಿಂಗ ಧರಿಸಬೇಕೆಂಬ ಆಸೆಯಾಗಲು ಹುಡುಗ ಹಿರಿಯರನ್ನು ಒತ್ತಾಯಿಸಿದನು. ಲಿಂಗಧಾರಣೆಗೆಂದು ಹುಡುಗ ಹಾಗೂ ಮನೆಯ ಯಜಮಾನ ಬಂಡಳ್ಳಿಯಿಂದ ಮುಡುಕುತೊರೆಗೆ ಬಂದಿ ದ್ದರು. ವೀರಶೈವರಲ್ಲಿ ನಡೆಯುವಂತೆಯೇ ಲಿಂಗಧಾರಣೆ ಶಾಸ್ತ್ರೋಕ್ತವಾಗಿ ನಡೆಯಿತು.

ಲಿಂಗವಂತ ಹರಿಜನರಲ್ಲಿ ಲಿಂಗಧಾರಣೆಯು ಮಗು ಜನಿಸಿದ ಹತ್ತನೇ ದಿವಸ ಜರು ಗುವುದು. ಅದರ ಕೊರಳಿಗೆ ಲಿಂಗವನ್ನು ವಸ್ತ್ರದಲ್ಲಿ ಕಟ್ಟುವ ಪದ್ಧತಿ ಇದೆ. ಸಣ್ಣ ಮಕ್ಕಳಿಗೆ. 'ಕರಣಬೋಧೆ' (= ಕಿವಿಯಲ್ಲಿ ಗುರು ಪಂಚಾಕ್ಷರೀಮಂತ್ರವನ್ನು ಉಚ್ಚರಿಸುವುದು) ಮಾಡಿ 'ಮ ಣಿ ದೀ ಕ್ಷೆ' (= ರುದ್ರಾಕ್ಷಿಧಾರಣೆ) ಮಾಡುವುದೂ ಉಂಟು. ೩೦–೪೦ ವರ್ಷಗಳ ಹಿಂದೆ ಈ ಕ್ರಮ ಜಾರಿಯಲ್ಲಿದ್ದಿತು. ಮೈಸೂರು ಹಾಗೂ ಅದರ ಸುತ್ತಮುತ್ತಣ 'ದೇವರ ಗುಡ್ಡ'ರು7 ರುದ್ರಾಕ್ಷಿ ಧರಿಸಿದರೂ ಇವರು ಆಚಾರನಿಷ್ಠ

---

7. ಇವರು ಹೊಲೆಯ, ಮಾದಿಗ, ಪರಿವಾರ ಹೀಗೆ ಎಲ್ಲಾ ಜಾತಿಗಳಲ್ಲೂ ಇರುವರು. ಇವರು ಕಟ್ಟುನಿಟ್ಟಾದ ಆಚಾರವಂತರಲ್ಲ. ಮಾಂಸಭಕ್ಷಣೆ, ಸುರಾಪಾನ, ಭವಿ ಸಂಪರ್ಕ ಇತ್ಯಾದಿಗಳ ಆಚರಣೆಯು ಗುಡ್ಡರೂ ಉಂಟು.

 

ರಾಗಿಲ್ಲದಿರುವುದರಿಂದ, ಇತ್ತೀಚೆಗೆ ಲಿಂಗವಂತ ಹರಿಜನರು 'ಮಣಿದೀಕ್ಷೆ' ಪಡೆಯುವ ಪದ್ಧತಿಯನ್ನು ಉದ್ದೇಶಪೂರ್ವಕವಾಗಿ ನಿಲ್ಲಿಸಿರುವರು. ಈಗ ಇವರಲ್ಲಿ ಲಿಂಗಧಾರಣೆ ಹೆಣ್ಣಿಗಾಗಲಿ ಗಂಡಿಗಾಗಲಿ ಹದಿನಾರನೆಯ ವಯಸ್ಸಿನಲ್ಲಾಗುವುದು. ಕೆಲವರು ವಿವಾಹ ಸಮಯದಲ್ಲಿ ಲಿಂಗಧಾರಣೆ ಮಾಡಿಸುವ ಪರಿಪಾಠ ಬೆಳೆಯಿಸಿಕೊಂಡಿರುವರು.

ಲಿಂಗವಂತ ಹರಿಜನರು ಹರಿಜನರು ವಾಸವಿರುವ ಭಾಗದಲ್ಲೇ ಇದ್ದರೂ ಲಿಂಗವಂತರಲ್ಲದವರನ್ನು ಭವಿಗಳೆಂದು ಭಾವಿಸುವರು. ಒಡಹುಟ್ಟಿದ ಸೋದರ ಸೋದರಿ ಪಕ್ಕದ ಮನೆಯಲ್ಲೇ ವಾಸವಿದ್ದರೂ ಅವರ ಮನೆಯನ್ನು ಪ್ರವೇಶಿಸುವುದಿಲ್ಲ. ಮಾತುಕತೆ ಹೊರತಾಗಿ ಬೇರಾವ ಸಂಪರ್ಕವೂ ಅವರೊಡನೆ ಇಲ್ಲ. ತಮ್ಮ ಪೂರ್ವಾಶ್ರಮದ ಬಂಧುಗಳು ನಡೆಸುವ ಶುಭಾಶುಭ ಕಾರ್ಯಗಳಲ್ಲಿ ಭಾಗವಹಿಸುವುದಿಲ್ಲ. ಲಿಂಗವಂತರ ಮನೆಯಲ್ಲಿ ಮಾತ್ರ ಊಟೋಪಚಾರ, ವಿವಾಹ ಸಂಬಂಧ ಮೊದಲಾದುವನ್ನು ಮಾಡುವರು. ಹೆಣ್ಣುಮಕ್ಕಳನ್ನು (ಸೊಸೆಯಾಗಿ) ತರುವಾಗ ಲಿಂಗವಂತರ ಮನೆಯಲ್ಲಿಯೇ ತರುವರು. ಹೆಣ್ಣುಮಕ್ಕಳನ್ನು ಕೊಡುವಾಗಲೂ ಇದೇ ಕ್ರಮ ಅನುಸರಿಸುವರು. ರಕ್ತಸಂಬಂಧವನ್ನು ಕಡಿದುಕೊಳ್ಳಲಾಗದವರು, ಲಿಂಗವಂತರಲ್ಲದ ತಮ್ಮ ಬಂಧುಗಳಿಗೆ ತಮ್ಮ ಹೆಣ್ಣುಮಕ್ಕಳನ್ನು ಕೊಟ್ಟಿರುವ ಪ್ರಸಂಗಗಳೂ ಉಂಟು. 'ಕೊಟ್ಟ ಹೆಣ್ಣು ಕುಲಕ್ಕೆ ಹೊರಗು' ಎಂಬ ಗಾಣ್ಣುಡಿಯಂತೆ ಹಲವರು ತಮ್ಮ ಮಗಳು ಸುಖವಾಗಿರಲಿ ಎನ್ನುವ ಕಾರಣಕ್ಕಾಗಿ ಅನುಕೂಲವಂತ ಅಲಿಂಗಿಗಳ ಮನೆಗೆ ಹೆಣ್ಣು ಕೊಟ್ಟಿರುವ ಸಂದರ್ಭಗಳೂ ಹಲವಿವೆ. ಅಲಿಂಗಿಗಳ ಕನ್ಯೆಯರನ್ನು ತಂದುಕೊಳ್ಳುವಾಗ ವಿವಾಹ ಸಮಯದಲ್ಲಿ ಲಿಂಗಧಾರಣೆ ಮಾಡಿ ತಮ್ಮವರನ್ನಾಗಿ ಮಾಡಿಕೊಳ್ಳುವ ಪದ್ಧತಿ ಇದೆ. ತಮ್ಮ ಅಲಿಂಗಿ ಮಗಳನ್ನು ನೋಡಲು ಆಕೆಯ ಮನೆಗೆ ಹೋದರೂ ಮನೆಯ ಒಳಗೆ ಪ್ರವೇಶಿಸುವುದಿಲ್ಲ. ಮನೆಯ ಪಡಸಾಲೆಯಲ್ಲಿಯೇ ಕುಳಿತು ಎಲ್ಲರ ಕ್ಷೇಮಸಮಾಚಾರ ವಿಚಾರಿಸಿ ಹಿಂತಿರುಗುವರು. ಮಗಳ ಊರಲ್ಲಿ ತಂಗಬೇಕಾದ ಅನಿವಾರ್ಯ ಪರಿಸ್ಥಿತಿ ಬಂದರೆ, ಆಗ ಆ ಊರಿನ ಲಿಂಗವಂತ ಹರಿಜನರ ಮನೆಯಲ್ಲಿ ತಂಗುವರು, ಅಲ್ಲಿಯೇ ಊಟೋಪಚಾರ ಮಾಡುವರು. ಭವಿಗಳಿಗೆ ಮದುವೆ ಮಾಡಿಕೊಟ್ಟ ಮಗಳು ತಂದೆಯ ಮನೆಗೆ ಶುಭಾಶುಭ ಕಾರ್ಯಗಳಿಗೆ ಬಂದರೂ ಅಲ್ಲಿ ಉಳಿಯುವುದಿಲ್ಲ. ಸಮೀಪದ ತಂದೆಯ ಬಳಗದವರ ಮನೆಯಲ್ಲಿ ತಂಗುವಳು. ಮಗಳು ತಂಗಿರುವ ಮನೆಗೇ ಭಕ್ಷ್ಯ ಭೋಜ್ಯಾದಿಗಳನ್ನು ಕಳುಹಿಸಿ ಸಮಾಧಾನ ತಂದುಕೊಳ್ಳುವರು.

ನಾವು ಸಂದರ್ಶಿಸಿದ ಲಿಂಗವಂತ ಹರಿಜನರ ಮನೆಗಳೆಲ್ಲವೂ ಚೊಕ್ಕಟವಾಗಿದ್ದುವು. ಮನೆಯಲ್ಲಿ ಸಾಮಾನ್ಯವಾಗಿ ಬಸವಣ್ಣ, ಮಹಾದೇವಿಯಕ್ಕ, ತೋಂಟದ ಸಿದ್ಧಲಿಂಗರ ಫೋಟೋಗಳು ಗೋಡೆಗೆ ಹೊಂದಿಕೊಂಡಿರುತ್ತಿದ್ದುವು.

(ಕೆಲವರ ಮನೆಯಲ್ಲಿ ಅಂಬೇಡ್ಕರರ ಫೋಟೋ ದೇವರ ಫೋಟೋ ಪಕ್ಕದಲ್ಲಿರುತ್ತಿದ್ದಿತು.) ಸಾಮಾನ್ಯವಾಗಿ ಸ್ತ್ರೀಪುರುಷರೀರ್ವರೂ ಸ್ನಾನಮಾಡಿ ಮಡಿಯಾಗಿ ನಿತ್ಯಪೂ ಶಿವಪೂಜೆ ಮಾಡುವರು. ಶಿವಪೂಜೆಯಾದ ಮೇಲೆ ಪ್ರಸಾದ ರೂಪದಲ್ಲಿ ಆಹಾರ ಸ್ವೀಕರಿಸುವರು. ಜನನ, ನಾಮಕರಣ, ವಿವಾಹ, ಅಂತ್ಯಕ್ರಿಯೆ ಹೀಗೆ ಯಾವ ಕಾರ್ಯ ಮಾಡಬೇಕಾದರೂ ಮಠದ ಸ್ವಾಮಿಗಳನ್ನು ಇಲ್ಲವೆ ಪೌರೋಹಿತ್ಯ ಬಲ್ಲವರನ್ನು ಕರೆಯಿಸುವರು. ಶುಭಾಶುಭ ಕಾರ್ಯಗಳೆಲ್ಲವೂ ವೀರಶೈವರ ಆಚರಣೆಯಂತೆಯೇ ಇವೆ, ಹೆಚ್ಚಿನ ವ್ಯತ್ಯಾಸಗಳಿಲ್ಲ.

ಲಿಂಗವಂತ ಹರಿಜನರು ಪ್ರಧಾನವಾಗಿ ವ್ಯವಸಾಯಸ್ಥರು. ಬಹಳ ಜನ ಬೇರೆಯವರ ಹೊಲಗದ್ದೆಗಳನ್ನು ಗುತ್ತಿಗೆ ಹಿಡಿದು ಮಾಡುವವರು. ಆರ್ಥಿಕವಾಗಿ ತೀರಾ ಹಿಂದುಳಿದವರು. ಜ್ಞಾನಮಾರ್ಗವನ್ನು ಹಂಬಲಿಸಿ ಬಂಧು-ಬಳಗದವರನ್ನು ತ್ಯಜಿಸಿ ಉತ್ತಮ ಬಾಳ್ವೆ ನಡೆಸುವ ಧ್ಯೇಯಹೊಂದಿ ಲಿಂಗವಂತರಾದ ಇವರು ಮಾನಸಿಕವಾಗಿ ತೃಪ್ತಿ ಪಡೆದವರೇ ಹೊರತು ಸಮಾನ ಸ್ಥಾನಮಾನಗಳನ್ನು ಲಿಂಗವಂತ ಸಮಾಜದಿಂದ ಪಡೆಯಲಾಗಲಿಲ್ಲ. ಇಂದು ಇವರ ಲೌಕಿಕಸ್ಥಿತಿ ಹಿಂದಿನದಕ್ಕಿಂತ ಮೇಲೇರಿಲ್ಲ. ಲಿಂಗವಂತರಾಗಿದ್ದರೂ ಸವರ್ಣೀಯರಿಗೆ ಇವರು ಅಸ್ಪೃಶ್ಯರೇ. ತಮ್ಮವರಿಂದ ಬೇರೆಯಾಗಿ ಆದರೆ ಉತ್ತಮ ಕುಲದವರಿಗೆ ಬೇಡವಾಗಿ ಇಂದು ಇವರ ಸ್ಥಿತಿ ತ್ರಿಶಂಕುಸ್ಥಿತಿಯಾಗಿದೆ. ೨೦ನೇ ಶತಮಾನದಲ್ಲಿ ಇವರು ಉತ್ತಮರಾಗಲು ನಡೆಸುತ್ತಿರುವ ಪ್ರಯತ್ನವನ್ನು, ಸಮಾಜ ಇವರ ಬಗೆಗೆ ತೋರುತ್ತಿರುವ ನಿರ್ಲಕ್ಷ್ಯವನ್ನು ಗಮನಿಸಿದಾಗ ೧೨ನೇ ಶತಮಾನದಲ್ಲಿ ಬಸವಣ್ಣ ನಡೆಸಿದ ಧಾರ್ಮಿಕ ಕ್ರಾಂತಿಯ ಅನಂತರದ ಪರಿಸ್ಥಿತಿ ನೆನಪಿಗೆ ಬರುತ್ತದೆ. ಶ್ರೇಷ್ಠ ಮಾನವತಾವಾದಿಯಾದ ಬಸವಣ್ಣ ಅಸ್ಪೃಶ್ಯರ ಏಳಿಗೆಯ ಕನಸನ್ನು ಕಂಡು ತನ್ನ ಆದರ್ಶದ ಸಮಾಜವನ್ನು ಕಟ್ಟುವಾಗ ಅವನು ಎದುರಿಸಿರಬಹುದಾದ ಸಮಸ್ಯೆಗಳೇನು ಎಂಬುದನ್ನು ಇಂದಿನ ಲಿಂಗವಂತ ಹರಿಜನರ ಸ್ಥಿತಿ-ಗತಿಗಳನ್ನು ಕಂಡಾಗ ಸ್ವಲ್ಪಮಟ್ಟಿಗೆ ಊಹಿಸಬಹುದಾಗಿದೆ. ೧೨ನೇ ಶತಮಾನದ ಕೆಳವರ್ಗದವರು ಬಸವಣ್ಣನ ಭವ್ಯ ವ್ಯಕ್ತಿತ್ವಕ್ಕೆ, ವಿಶಾಲ ಹೃದಯಕ್ಕೆ, ಹಿರಿದಾದ ಆದರ್ಶಕ್ಕೆ ಮಾರುಹೋಗಿ ಲಿಂಗವಂತರಾದರೂ ಅವರು ಎದುರಿಸಿರಬಹುದಾದ ಸಮಸ್ಯೆಗಳು ಇಂದಿನ ಲಿಂಗವಂತ ಹರಿಜನರ ಸಮಸ್ಯೆಗಳೇ ಆಗಿವೆ.

ಲಿಂಗವಂತ ಹರಿಜನರು ಇಂದು ಪ್ರತ್ಯೇಕ ಸಮಾಜವಾಗಿ ಉಳಿದುಬಿಟ್ಟಿರುವರು. ಆರ್ಥಿಕವಾಗಿ, ಸಾಮಾಜಿಕವಾಗಿ, ಶೈಕ್ಷಣಿಕವಾಗಿ ಇವರು ಮೇಲೇರಿಲ್ಲ. ಇವರ ಉದ್ಧಾರಕ್ಕೆ ಮಠಗಳು ನಿಲ್ಲಬೇಕು. ಆದರೆ ಇವರ ಮಠಗಳು ಆರ್ಥಿಕವಾಗಿ ಬಲಿಷ್ಠವಾಗಿಲ್ಲ. ತಮ್ಮ ಉದ್ಧಾರವನ್ನು ತಾವೇ ಕಂಡುಕೊಳ್ಳಬೇಕಾದ ಪರಿಸ್ಥಿತಿ ಇವರಿಗೀಗ ಒದಗಿದೆ. ತಮ್ಮ ಸ್ಥಿತಿ-ಗತಿಗಳನ್ನು ಉತ್ತಮಪಡಿಸಿಕೊಳ್ಳಲು ಇವರಿಗಿರುವ ಒಂದೇ

ಮಾರ್ಗವೆಂದರೆ, ಸರಕಾರವು ಕೆಳವರ್ಗದವರಿಗೆ ಒದಗಿಸಿರುವ ಸೌಲಭ್ಯಗಳನ್ನು ಒಳಸಿಕೊಳ್ಳುವುದು. ಲಿಂಗವಂತರಾದರೂ ವೀರಶೈವ ಸಮಾಜ ತನ್ನ ತೆಕ್ಕೆಗೆ ಇವರನ್ನು ತಂದುಕೊಳ್ಳಲಿಲ್ಲ. ಅದರಂತೆ ಶುಚಿಜೀವನ ನಡೆಸುತ್ತಿದ್ದರೂ ತಮ್ಮನ್ನು ಹರಿಜನರೆಂದೇ ಆ ಸಮಾಜ ದೂರದಲ್ಲಿರಿಸಿರುವುದು ನೋವಿನ ಸಂಗತಿಯಾಗಿದೆ. ವೀರಶೈವ ಮಠಗಳಲ್ಲಿ ಇವರ ಮಕ್ಕಳಿಗೆ ಪ್ರವೇಶವಿಲ್ಲ. 'ಜಾತಿಭಕ್ತರು-ಜಾತಿಲಿಂಗವಂತರು' ಎಂಬ ಭೇದದಿಂದಾಗಿ ಮಠಾಧಿಪತಿಗಳು ಇವರನ್ನು ದೂರವಿರಿಸಿರುವರು. ವೀರಶೈವ ಮಠಗಳಲ್ಲಿ ಊಟ ಹಾಕಿದರೂ ಪಂಕ್ತಿಭೇದ ಮಾಡುವರು. ಊಟದ ಮನೆಯ ಹೊರಗೆ ಅಸ್ಪೃಶ್ಯರಿಗೆ ಬಡಿಸುವಂತೆ ಊಟ ಹಾಕುವುದರ ಮೂಲಕ ಎಸಗುವ ಅಪಚಾರ ಇವರಿಗೆ ಬೇಸರ ತಂದರೆ ಆಶ್ಚರ್ಯವಲ್ಲ. ಈ ಪರಿಸ್ಥಿತಿಯಲ್ಲಿ ಕೆಳವರ್ಗದವರಿಗೆ ಸರಕಾರ ಒದಗಿಸಿರುವ ಸೌಲಭ್ಯಗಳನ್ನು ಲಿಂಗವಂತರಾಗಿದ್ದರೂ ಹರಿಜನರೆಂದು ಹೇಳಿಕೊಂಡು ಇವರು ಪಡೆಯಬೇಕಾದುದು ಅನಿವಾರ್ಯವಾಗಿದೆ. ಅದು ಇವರ ಮನಸ್ಸಿಗೆ ಒಪ್ಪಿಗೆಯಾಗದಿದ್ದರೂ ಸಾಮಾಜಿಕ ಮನ್ನಣೆ ದೊರೆಯುವವರೆವಿಗೂ, ಆರ್ಥಿಕ ಪರಿಸ್ಥಿತಿ ಸುಧಾರಿಸುವವರೆವಿಗೂ ಇದನ್ನು ಪಡೆಯುವುದು ಅನಿವಾರ್ಯವಾಗಿದೆ. ಎಚ್ಚೆತ್ತ ಈ ಜನ ಈಗ ತಮ್ಮ ಮಕ್ಕಳಿಗೆ ಯೋಗ್ಯ ಶಿಕ್ಷಣ ಕೊಟ್ಟು ಅವರ ಭವಿಷ್ಯವು ತಮಗಿಂತ ಉತ್ತಮವಾಗುವುದರತ್ತ ಗಮನಹರಿಸುತ್ತಿರುವರು.

"ಮಹಾನುಭಾವರಾದ ಉರಿಲಿಂಗದೇವ ಮತ್ತು ಉರಿಲಿಂಗಪೆದ್ದಿಗಳ ಮಠಗಳು ಅಸ್ಪೃಶ್ಯರ ಮಠಗಳೆಂದು ಭಾವಿಸಲ್ಪಡುವ ಪರಿಸ್ಥಿತಿಯುಂಟಾಗಿರುವುದು ದುರ್ದೈವವೇ ಸರಿ. ವೀರಶೈವ ಸಮಾಜದಲ್ಲಿ ಆಗಿಹೋದ ಮಹಾಪುರುಷರ ಚರಿತ್ರೆಗಳನ್ನು ಅರಿಯದೇ ಇದ್ದುದರ ಪರಿಣಾಮವೇ ಇದಕ್ಕೆ ಕಾರಣವಲ್ಲದೆ ಬೇರೆ ಏನಿರಬಹುದು ?" ಎಂದು ರಾ. ಬ. ಫ. ಗು. ಹಳಕಟ್ಟಿಯವರು ಈಗ್ಗೆ ಮೂವತ್ತೇಳು ವರ್ಷಗಳ ಹಿಂದೆಯೇ ಲಿಂಗವಂತ ಹರಿಜನರ ಬಗೆಗೆ ತಮ್ಮ ಸಂಕಟವನ್ನು ತೋಡಿಕೊಂಡಿರುವರು. ನಾಲ್ಕುದಶಕಗಳುರುಳಿದರೂ ಅವರ ಸ್ಥಿತಿ ಹಾಗೆಯೇ ಉಳಿದಿದೆ. ನಮ್ಮ ವೀರಶೈವ ಮಠಾಧಿಪತಿಗಳು ಈ ದಿಶೆಯಲ್ಲಿ ಯೋಚಿಸಬೇಕಾಗಿದೆ. ಬಸವಣ್ಣನ ಸಾಮಾಜಿಕ, ಧಾರ್ಮಿಕ ಕ್ರಾಂತಿಯ ಬಗೆಗೆ ; ಮಾದಾರ ಚೆನ್ನಯ್ಯ, ಮಾದಾರ ಧೂಳಯ್ಯ, ಹಡಪದ ಅಪ್ಪಣ್ಣ, ಅಂಬಿಗರಚೌಡಯ್ಯ ಮೊದಲಾದ ಕೆಳವರ್ಗದ ವಚನಕಾರರ ಬಗೆಗೆ ವೇದಿಕೆಯ ಮೇಲೆ ಮೈದುಂಬಿ ಸಂಘಟನೆಯ ಬಗೆಗೆ ಮಾರುದ್ದ ಭಾಷಣ ಮಾಡುವ ಮಠಾಧಿಪತಿಗಳು ತಮ್ಮ ಕಣ್ಣುಮುಂದಿರುವ ಲಿಂಗವಂತ ಹರಿಜನರ ಬಗೆಗೆ ಹೃದಯವಿಹೀನರಾಗುವುದು ಅವರ ಸ್ಥಾನ-ಮಾನಗಳಿಗೆ ಗೌರವ ತರುವಂತಹುದ್ದಲ್ಲ. ಶತಶತ

---

8. ಶಿವಶರಣರ ಚರಿತ್ರೆಗಳು (ಭಾಗ ೧) ಸಂ: ರಾ. ಬ. ಫ. ಗು. ಹಳಕಟ್ಟಿ (೧೯೪೪) ಪು. ೯ರ ಅಡಿ ಟಿಪ್ಪಣಿ.

ಮಾನಗಳಿಂದ ಬಂದ ಲಿಂಗವಂತ ಹರಿಜನರನ್ನು ತಮ್ಮವರನ್ನಾಗಿ ಮಾಡಿಕೊಳ್ಳದೆ ಹೊಸ ಹೊಸದಾಗಿ ಲಿಂಗಧಾರಣೆ ಮಾಡಹೋಗುವ ಇಂದಿನ ಸುಧಾರಕ ವರ್ಗದವರ ಅರ್ಥಹೀನ ವರ್ತನೆಯು ನಗೆಪಾಟಲೇ ಸರಿ! ನಮ್ಮ ಮಠಾಧಿಪತಿಗಳು ಹಾಗೂ ವೀರಶೈವ ಸಮಾಜ ಬಾಂಧವರು ಉರಿಲಿಂಗಪೆದ್ದಿಯ ಸಂಪ್ರದಾಯದವರನ್ನು[9] ಇನ್ನಾದರೂ ಗೌರವಿಸುವಂತಾದರೆ ಬಸವಣ್ಣನು ನಡೆಸಿದ ಕ್ರಾಂತಿಗೆ ಮನ್ನಣೆ ಸಲ್ಲಿಸಿದಂತಾಗುತ್ತದೆ. ಮೇಲಾಗಿ, ಬಸವಣ್ಣನ ಆತ್ಮಕ್ಕೆ ಶಾಂತಿ ಬಯಸಿದಂತಾಗುತ್ತದೆ.



---

9. ಇದರಂತೆ ಲಿಂಗವಂತ ಮಡಿವಾಳರು, ಹಡಪದವರು, ಚಮ್ಮಾರರು ಮೊದಲಾದ ಹಲವಾರು ಕಾಯಕನಿರತ ಪಂಥೀಯರು ವೀರಶೈವರಿಂದ ತಿರಸ್ಕೃತರಾಗಿ ಪ್ರತ್ಯೇಕ ಪ್ರತ್ಯೇಕವಾಗಿಯೇ ಉಳಿದಿದ್ದಾರೆ. ಇವರ ಉದ್ಧಾರಕ್ಕೆ ಏನೊಂದು ಪ್ರಯತ್ನವೂ ನಡೆಯುತ್ತಿಲ್ಲವೆಂಬುದನ್ನು ಇಲ್ಲಿ ನೆನೆಯಬಹುದಾಗಿದೆ.

# ವಚನಗಳ ಹಿನ್ನೆಲೆಯಲ್ಲಿ 'ಸನ್ಯಾಸ' -- ಒಂದು ಪುನರಾಲೋಚನೆ

ಭಾರತೀಯರು ಚತುರ್ವಿಧ ಪುರುಷಾರ್ಥಗಳನ್ನು ವ್ಯಕ್ತಿಯ, ಐಹಿಕ, ಪಾರಮಾರ್ಥಿಕ ಬದುಕಿನ ಉತ್ತಮಿಕೆಗೆ ಪ್ರಮುಖ ಸಾಧನಗಳೆಂದು ಬಗೆದಿದ್ದರು. ಹಾಗೆಯೇ ಚತುರಾಶ್ರಮಗಳ ಮೂಲಕ ವ್ಯಕ್ತಿಯ ಬದುಕಿನ ನಾಲ್ಕು ಪ್ರಮುಖ ಘಟ್ಟಗಳನ್ನು ಕಲ್ಪಿಸಿ, ಅವರು ಶುಚಿಜೀವನದ ಮೂಲಕ ವ್ಯಕ್ತಿ ಹೇಗೆ ಕ್ರಮಾಗತ ವಿಕಾಸ ಹೊಂದಬಹುದೆಂಬುದನ್ನು ತಿಳಿಸಬಯಸಿದ್ದರು. ನಮ್ಮ ಪ್ರಾಚೀನ ದ್ರಷ್ಟಾರರು ವ್ಯಕ್ತಿಯ ವಿಕಾಸಶೀಲವಾದ ಗತಿ ಇಹಕ್ಕಷ್ಟೇ ಪರಿಮಿತವಾಗದೆ ಪರಕ್ಕೂ ವಿಸ್ತೃತಗೊಳ್ಳಬೇಕೆಂದು ಬಯಸಿದ್ದರು. ಅಂತೆಯೇ ಅವರು ಇಹವನ್ನೂ ಮೀರಿದ ಸುಖ ಪರದಲ್ಲಿದೆಯೆಂಬ ಭಾವನೆಗೆ ಒತ್ತುಕೊಟ್ಟರು. ಇದರ ಒಟ್ಟಂದದ ಪರಿಣಾಮವಾಗಿ ಇಹಕ್ಕಿಂತ ಪರದ ಅಲೌಕಿಕ ಸುಖಪ್ರಾಪ್ತಿಗೆ ಹೆಚ್ಚಿನ ಮಹತ್ವ ಪ್ರಾಪ್ತವಾಯಿತು. ಭಾರತೀಯ ಧರ್ಮಶಾಸ್ತ್ರಗಳು ಬದುಕಿನ ಪರಮೋಚ್ಚ ಗುರಿಯನ್ನು ಮೋಕ್ಷಕ್ಕೆ ಕೊಟ್ಟವು. ಚತುರ್ವಿಧ ಪುರುಷಾರ್ಥಗಳನ್ನೇ ಆಗಲಿ ಚತುರಾಶ್ರಮಗಳನ್ನೇ ಆಗಲಿ ಭಾವಿಸಿದಾಗ, ಅವುಗಳ ಗುರಿ ಅಲೌಕಿಕವಾದ ಸುಖದ ಬೆನ್ನು ಹಿಡಿದು ಸಾಗಿದಂತೆ ಭಾಸವಾಗುತ್ತದೆ. ಬ್ರಾಹ್ಮಣ, ಜೈನ, ಬೌದ್ಧ ಧರ್ಮಗಳ ಧಾರ್ಮಿಕ ಗ್ರಂಥಗಳನ್ನು, ಅವು ಬೋಧಿಸುವ ತತ್ತ್ವಗಳನ್ನು ಗಮನಿಸಿದಾಗ ಮೇಲಿನ ಮಾತಿಗೆ ಅಲ್ಲಿ ಸ್ಪಷ್ಟವಾದ ಹಿನ್ನೆಲೆ ಕಾಣಸಿಗುತ್ತದೆ. ೧೨ನೇ ಶತಮಾನದಲ್ಲಿ ನಡೆದ ಶಿವಶರಣರ ವೈಚಾರಿಕ ಕ್ರಾಂತಿಯ ಪರಿಣಾಮವಾಗಿ ಪರಂಪರಾಗತವಾಗಿ ರೂಢಮೂಲವಾಗಿದ್ದ ಹಲವು ನಂಬಿಕೆಗಳು, ಧೋರಣೆಗಳು ಪಲ್ಲಟಗೊಂಡವು. ವಚನಕಾರರು ಪುರುಷಾರ್ಥಗಳನ್ನೇ ಆಗಲಿ ಚತುರಾಶ್ರಮಗಳನ್ನೇ ಆಗಲಿ ಪೂರ್ಣವಾಗಿ ತಿರಸ್ಕರಿಸಲಿಲ್ಲ. ಅವುಗಳ ಧೋರಣೆಯ ಬಗೆಗೆ ಮಾತ್ರ ಸಂದೇಹ ಪ್ರಕಟಪಡಿಸಿದರು ; ಅವುಗಳ ಗುರಿಯನ್ನು ಪ್ರಶ್ನಿಸಿದರು. ಆತ್ಮನ ಊರ್ಧ್ವಗತಿಗೆ ಸಂಸಾರ ಒಂದು ಬಂಧನವೆಂದು, ತೊಡಕೆಂದು ಅವರು ಎಂದೂ ಭಾವಿಸಿರಲಿಲ್ಲ. ಅವರು ವಾಸ್ತವ ಬದುಕಿಗೆ

ಪ್ರಾಧಾನ್ಯ ಕೊಟ್ಟು, ಅದು ಒದಗಿಸುವ ಸುಖಾಸುಖಿಗಳಿಗೇ ತೃಪ್ತರಾದರು. ಅದಕ್ಕಿಂತ ಮಿಗಿಲಾದ ಮತ್ತೊಂದನ್ನು ಅವರು ಕಾಣಬಯಸಿರಲಿಲ್ಲ. ಹೆಣ್ಣು-ಹೊನ್ನು-ಮಣ್ಣು ವ್ಯಕ್ತಿಯನ್ನು ಪಥಭ್ರಷ್ಟನನ್ನಾಗಿ ಮಾಡುವ 'ಮಾಯೆ' ಎಂಬ ಮಿಥ್ಯಾವಾದವನ್ನು ಅವರು ಒಪ್ಪಿರಲಿಲ್ಲ. 'ಮನದ ಮುಂದಣ ಆಸೆಯೇ ಮಾಯೆ' 'ಸತಿ-ಪತಿಗಳೊಂದಾದ ಭಕ್ತಿ ಹಿತವಾಗಿಪ್ಪುದು ಶಿವಂಗೆ' 'ಲೋಕದ ಚೇಷ್ಟೆಗೆ ರವಿ ಬೀಜವಾದಂತೆ ಕರಣಂಗಳ ಚೇಷ್ಟೆಗೆ ಮನವೇ ಬೀಜ'—ಎಂಬ ತಾತ್ತ್ವಿಕ ನಿಲುವು ಅವರದು. ವ್ಯಕ್ತಿ ಊರ್ಧ್ವಗಾಮಿತ್ವಕ್ಕೆ ಸಂಸಾರವಾಗಲೀ, ಹೆಣ್ಣಾಗಲೀ ನೇರವಾಗಿ ತೊಡಕಾಗಿಲ್ಲ. ವ್ಯಕ್ತಿಯ ಪತನಕ್ಕೆ ಅವನ ಅಳಿಮನವೇ ಕಾರಣ ಎಂದು ನಂಬಿದ್ದರು. ಮನಸ್ಸಿನ ಚಾಂಚಲ್ಯಕ್ಕೆ ಸಂಸಾರಬಂಧ ಒಂದು ಕಾರಣವೆಂದು ವಚನಕಾರರು ಎಂದೂ ಭಾವಿಸಿರಲಿಲ್ಲ, ಸಂಸಾರದಲ್ಲಿದ್ದುಕೊಂಡೇ ಅದು ಒದಗಿಸುವ ಸುಖ-ಸಂತೋಷ, ದುಃಖ-ವಿಯೋಗಗಳನ್ನು ಅನುಭವಿಸುತ್ತಾ, ಅರಿಷಡ್ವರ್ಗಗಳನ್ನು ಹತ್ತಿಕ್ಕುವ, ಅತ್ತಲಿತ್ತ ಚಲಿಸುವ ಮನಸ್ಸನ್ನು ಕಟ್ಟಿ ನಿಲ್ಲಿಸುವ ವಿಚಾರ ಅವರದು. ಸಂಸಾರ ಒಡ್ಡುವ ಆಮಿಷಗಳಿಗೆ ತತ್ತರಿಸಿದ ಮನ ಅದರಿಂದ ಪಾರುಗಾಣಲು ಸಂಸಾರವನ್ನು ಕೊಕ್ಕರಿಸಿ, ಮಠ, ಪರ್ವತ, ನಿರ್ಜನ ಪ್ರದೇಶಗಳನ್ನು ಅರಸಿ ಹೋಯಿತು. ಶರಣರು ಈ ಪಲಾಯನವಾದಿತ್ವವನ್ನು ಒಪ್ಪುವುದಿಲ್ಲ. "ಮಠವೇಕೋ, ಪರ್ವತವೇಕೋ, ಜನವೇಕೋ, ನಿರ್ಜನವೇಕೋ ಚಿತ್ತ ಸಮಾಧಾನವುಳ್ಳ ಶರಣಂಗೆ ! ಮತ್ತೆ ಹೊಜಗಣ ಚಿಂತೆ, ಧ್ಯಾನ, ಮೌನ, ಜಪ, ತಪವೇಕೋ ತನ್ನ ತಾನರಿದ ಶರಣಂಗೆ...."1 ಎಂಬ ಪ್ರಭುವಿನ ವಿಚಾರಸರಣಿ ಶರಣರ ಒಟ್ಟು ಧೋರಣೆಯನ್ನು ಪ್ರತಿಫಲಿಸುತ್ತದೆ. ಅತ್ತಲಿತ್ತ ಚಲಿಸುವ ಮನವನ್ನು ಕಟ್ಟಿ ನಿಲ್ಲಿಸಲು ಇಂದ್ರಿಯ ನಿಗ್ರಹ ಮಾಡಬೇಕು ; ಪ್ರಕೃತಿದತ್ತ ಸುಖಗಳಿಂದ ದೂರ ನಿಲ್ಲಬೇಕು ಎಂಬ ವಾದವನ್ನೂ ಶರಣರು ಒಪ್ಪುವುದಿಲ್ಲ. ಪಂಚಭೂತಗಳಿಂದಾದ ತನುವು ಪಂಚೇಂದ್ರಿಯಗಳು ಒದಗಿಸುವ ಸುಖಗಳಿಂದ ವಂಚಿತವಾಗಬೇಕಿಲ್ಲ. ಹೆಣ್ಣು-ಗಂಡು ಪ್ರಕೃತಿಯ ಅವಿಭಾಜ್ಯ ಘಟಕ. ಲೈಂಗಿಕಕ್ರಿಯೆ ಪ್ರಕೃತಿದತ್ತವಾದುದು. ಅದನ್ನು ಹತ್ತಿಕ್ಕಿ ನಿಲ್ಲುವುದು ಪ್ರಕೃತಿಗೆ ವಿರುದ್ಧವಾಗಿ ನಿಂತಂತೆ. ಬಸವಣ್ಣನು ಹೇಳಿದಂತೆ "ಇಂದ್ರಿಯ ನಿಗ್ರಹವ ಮಾಡಿದರೆ ಹೊಂದುವವು ದೋಷಂಗಳು ! ಮುಂದೆ ಬಂದು ಕಾಡುವವು ಪಂಚೇಂದ್ರಿಯಂಗಳು !"2 ಪಂಚೇಂದ್ರಿಯಗಳ ಸುಖಕ್ಕಾಗಲೀ, ಲೈಂಗಿಕ ಸುಖಕ್ಕಾಗಲೀ ಒಂದು ಮಿತಿ ಇರಬೇಕೆಂದು ವಚನಕಾರರು ಬೋಧಿಸಿದರೇ ಹೊರತು ಅವನ್ನು ಅವರು ನಿಷೇಧಿಸಲಿಲ್ಲ ; ತ್ಯಾಜ್ಯವೆನ್ನಲಿಲ್ಲ. ಬಸವಣ್ಣನೆನ್ನುವಂತೆ 'ಸತಿಪತಿ ರತಿಸುಖವ ಬಿಟ್ಟರೆ ಸಿರಿಯಾಳ

---

1. ಶೂನ್ಯಸಂಪಾದನೆ ಅಲ್ಲಮಪ್ರಭುದೇವರ ವಚನಗಳು (ಸಂ : ಡಾ॥ ಆರ್. ಸಿ. ಹಿರೇಮಠ, ಡಾ॥ ಎಂ. ಎಸ್. ಸುಂಕಾಪುರ), ವ. ೧೫೭.
2. ಬಸವಣ್ಣನವರ ಷಟ್‌ಸ್ಥಲದ ವಚನಗಳು (ಸಂ : ಡಾ॥ ಆರ್. ಸಿ. ಹಿರೇಮಠ), ವ. ೬೪೮.

ಚಂಗಳೆಯರು ? ಬಿಟ್ಟನೇ ಸಿಂಘು ಬಲ್ಲಾಳನು ?'3 ದೈಹಿಕ ಸುಖದಿಂದ ನಾವು ವಿವಂಚಿತರಾಗಬಾರದು. ಆದರೆ ಈ ದೈಹಿಕ ಸುಖ ಸತಿಗೆ ಪತಿಯಲ್ಲೇ, ಪತಿಗೆ ಸತಿಯಲ್ಲೇ ಪೂರ್ಣವಾಗಬೇಕು. ಸಿದ್ಧರಾಮ ಹೇಳುವಂತೆ 'ನೋಡುವ ನೋಟವದು ತನ್ನ ಸ್ತ್ರೀಯಲಲ್ಲದೆ ಪರಸ್ತ್ರೀಯಲ್ಲಿ ಹೊಲ್ಲ'.4 ಪಂಚೇಂದ್ರಿಯ, ಅರಿಷಡ್ವರ್ಗಗಳು, ಸಪ್ತಧಾತುಗಳು–ಇವೆಲ್ಲವನ್ನೂ ಮೆಟ್ಟಿ ನಿಲ್ಲಹೊರಟಲ್ಲಿ ಅವು ವ್ಯಕ್ತಿಯನ್ನು ಬೇರೆ ರೂಪಿನಿಂದ ಕಾಡುತ್ತವೆ. ಇವುಗಳನ್ನು ಗೆಲ್ಲುವೆನೆಂಬ ಅಳಿಮನವು ಹೊಂದುವ ಅಹಿತ ಫಲವನ್ನು ಮನಗಂಡೇ ಪ್ರಭುವು 'ಇದೆಲ್ಲವ ಕೊಂದ ಪಾಪ ನಿಮ್ಮ ತಾಗುವುದು'6 ಎಂದು ಎಚ್ಚರಿಸುವನು. ಇಂದ್ರಿಯ ನಿಗ್ರಹವಾದಿಗಳನ್ನು ಸಿದ್ಧರಾಮಯ್ಯನು 'ಇಂದ್ರಿಯ ನಿಗ್ರಹವ ಮಾಡಿದರೇನಯ್ಯಾ ಚಂದ್ರಧಾರಿಯಾಗಬಲ್ಲನೇ ?' ಎಂದು ಪ್ರಶ್ನಿಸಿ 'ಇಂದ್ರಿಯಂಗಳೆಂಬುದು ಮಾಯಾಜಾಲವು ತಾನೆ'6 ಎಂದು ಮಾರ್ಮಿಕವಾಗಿ ಹೇಳಿರುವನು.

ವಚನಕಾರರು, ಕಾಣದ 'ಅನುಪಮ ಸುಖ'ಕ್ಕಿಂತ ಕಣ್ಣಮುಂದಿನ ಬದುಕಿನ ಸುಖ–ದುಃಖ, ಆಸೆ–ನಿರಾಶೆಗಳಿಗೆ ಹೆಚ್ಚು ಸ್ಪಂದಿಸಿದರು. ಮರ್ತ್ಯಲೋಕ ಅವರ ಪಾಲಿಗೆ 'ಕರ್ತಾರನ ಕಮ್ಮಟ'. ಭವಿಷ್ಯದ ಸುಂದರ ಕನಸಿಗಿಂತ ಕಣ್ಣಮುಂದಣ ವಾಸ್ತವ ಬದುಕು ಹಾಗೂ ಅದರ ಬಹುಮುಖ ಸಮಸ್ಯೆಗಳು ಅವರಿಗೆ ತೀರಾ ಮುಖ್ಯವಾಗಿ ಕಾಣಬಂದಿತು. ಆದ್ದರಿಂದಲೇ ಅವರು ತಮ್ಮ ಬದುಕಿನ ಗುರಿಯನ್ನು ಮರ್ತ್ಯ-ಸ್ವರ್ಗಗಳಿಗೇ ಮೀಸಲು ಮಾಡದೆ ಅವನ್ನೂ ಮೀರಿದ ಎತ್ತರದ ನಿಲುವಿಗೆ ಏರಬಯಸಿದರು. 'ಸುರಲೋಕವನು ನರಲೋಕವನು ತೃಣವೆಂದು ಭಾವಿಸಿ, ಭವವ ದಾಂಟಿ, ತಮ್ಮ ತಮ್ಮ ಹುಟ್ಟನರಿದು, ಮಹಾಬೆಳಗನೆ ಕೂಡಿ ಬೆಳಗಿನಲ್ಲಿ ಬಯಲಾಗು'ವ7 ಉನ್ನತವಾದ ಆದರ್ಶವನ್ನು ಮುಂದಿಟ್ಟುಕೊಂಡು ನಡೆದರು. ವಚನಕಾರರ ಈ ನಿಲುವು ಅವರ ನಂತರ ೬೦–೭೦ ವರ್ಷಗಳ ಅಂತರದಲ್ಲಿ ಬಂದ ಭಕ್ತಕವಿ ಹರಿಹರನನ್ನೂ ಆಕರ್ಷಿಸಿತು ! ಹರಿಹರನ 'ಬಸವರಾಜದೇವರ ರಗಳೆ'ಯಲ್ಲಿ ಶಿವ ಜಂಗಮಾಕಾರದಿಂದ ಬಂದು ಬಸವನಿಗೆ ಇನ್ನು ಮರ್ತ್ಯದ ಬಾಳುವೆ ನಿನಗೆ ಸಾಕು, ಕೈಲಾಸಗಿರಿಗೆ ಪುಷ್ಪಕವೇರಿ ನಡೆ ಮಗನೆ ಎನ್ನುವನು. ಅದಕ್ಕೆ ಉತ್ತರವಾಗಿ "ಸಂಗಯ್ಯ

---

3. ಅದೇ.
4. ಶ್ರೀ ಸಿದ್ಧರಾಮೇಶ್ವರ ವಚನಗಳು (ಸಂ: ಡಾ॥ ಆರ್.ಸಿ. ಹಿರೇಮಠ), ವ.೫೭೧.
5. ವ್ಯೋಮಮೂರುತಿ ಅಲ್ಲಮಪ್ರಭುದೇವರ ವಚನಗಳು (ಸಂ : ಡಾ॥ ಆರ್. ಸಿ. ಹಿರೇಮಠ, ಡಾ॥ ಎಂ. ಎಸ್. ಸುಂಕಾಪುರ,) ವ. ೧೫೩.
6. ಶ್ರೀ ಸಿದ್ಧರಾಮೇಶ್ವರ ವಚನಗಳು (ಸಂ : ಡಾ॥ ಆರ್. ಸಿ. ಹಿರೇಮಠ), ವ. ೧೧೬೪.
7. ಶಿವಶರಣೆಯರ ವಚನಗಳು (ಸಂ : ಡಾ॥ ಆರ್.ಸಿ. ಹಿರೇಮಠ), ಲಿಂಗಮ್ಮನ ವಚನಗಳು, ವ. ೫೩, ಪು. ೩೪೯.

ಬಾಯಿಂದು ಕರೆವೆ ನೀನೆನ್ನುವಂ, ಹಿಂಗಲೀಯದು ಶರಣಗೋಷ್ಠಿ ಕೇಳೆನ್ನುವಂ, ಶರಣರೊಕ್ಕುದಣಿ ಸವಿ ಕೈಲಾಸದೊಳಗುಂಟೆ........ಇಲ್ಲಿಯ ಸುಖಂ ದೇವ ಅಲ್ಲಿಯುಳ್ಳೊಡೆ ಲೇಸು, ಅಲ್ಲೆನ್ನೆನಿಲ್ಲಿಯೆ[ೀ] ನಿಂದು ಹೋಹುದು ಲೇಸು"8 ಎಂದು ಬಸವಣ್ಣ ಬಿನ್ನವಿಸುವನು.

ತನುವನ್ನು ಕರಗಿಸಿ, ಕಾಯುವನ್ನು ಮುರುಗಿಸಿ, ನಿದ್ರೆಯನ್ನು ಕೆಡಿಸಿ ಮನವನ್ನು ಗೆಲ್ಲುವ ವಿದ್ಯೆಯನ್ನು ಕಲಿಯಹೊರಟ ಬುದ್ಧಿಹೀನರನ್ನು ಖಂಡಿಸುತ್ತಾ ಲಿಂಗಮ್ಮ "ಕಾಮ ಕ್ರೋಧವ ನೀಗಿ, ಲೋಭ ಮೋಹ ಮದ ಮತ್ಸರವ ಛೇದಿಸಿ, ಆಸೆ ರೋಷ ವಳಿದು ಜಗದ ಪಾಶವ ಬಿಟ್ಟು, ಆ ಮುಱುಗಿಸುವ ಕಾಯವನೆ ಪ್ರಸಾದ ಕಾಯವ ಮಾಡಿ ಸಲಹಿಸಿದರು. ಕೆಡಿಸುವ ನಿದ್ರೆಯನೆ ಯೋಗ ಸಮಾಧಿಯ ಮಾಡಿ, ಸುಖವನೇಡಿಸಿ ಜಗವನೆ ಗೆದ್ದ"ವರು ಶರಣರು. ಇದು ಭ್ರಾಂತರಾಗಿ ತಿರುಗುವ ಮನುಜರಿಗೆ ಸಾಧ್ಯವಿಲ್ಲ ಎಂದಿರುವಳು. ಸಕಲೇಶ ಮಾದರಸನು 'ಸನ್ಯಾಸಾಶ್ರಮ'ವನ್ನು ಸ್ವೀಕರಿಸಿದ ವಿರಕ್ತನು ಆ ಆಶ್ರಮ ಧರ್ಮವನ್ನೇ ಮರೆತು—ಶಮೆ, ದಮೆ, ಶಾಂತಿಗಳನ್ನು ಬಿಟ್ಟು—ಕೋಪತಾಪಗಳಿಗೆ ಒಳಗಾಗುವುದನ್ನು ಹೀಗೆ ವಿಡಂಬಿಸಿರುವನು :

ಅಡವಿಗೆ ಹೋಗಿ ಏವೆನು ? ಮನದ ರಜ ತಮ ಬಿಡದು
ಆಡ ಕಾವನ ತೋಱಿ ಗಿಡುವ ಕಡಿವನ ಬಡಿದೆ.
ಆಶ್ರಮವ ಕೆಡಿಸಿತ್ತಲ್ಲಾ ಸಕಳೇಶ್ವರದೇವಾ !
ನಿನ್ನ ಮಾಯೆ ಎತ್ತ ಹೋದಡೆ ಬೆನ್ನ ಬಿಡದು. 9

---

8. ನೂತನ ಪುರಾತನರ ರಗಳೆಗಳು (ಸಂ : ಡಾ॥ ಎಂ. ಎಸ್. ಸುಂಕಾಪುರ), ಪು. ೯೩.

9. ಈ ವಚನ ಸಕಳೇಶ ಮಾದರಸನ ವೈಯಕ್ತಿಕ ಅನುಭವವನ್ನು ಕುರಿತಂತೆಯೂ ಇದೆ. ಸಕಳೇಶ ಮಾದರಸನು ಕಲ್ಲುಕುರಿಕೆ ಎಂಬ ಪಟ್ಟಣದ ರಾಜನಾಗಿದ್ದು ವೈರಾಗ್ಯಗೊಂಡು ಶ್ರೀಶೈಲ ಪರ್ವತದ ಕಲ್ಲರಸನೆಂಬ ಶಿವಯೋಗಿಯಿಂದ ಉಪದೇಶಗೊಂಡು ಉಗ್ರ ತಪಸ್ಸನ್ನು ಆಚರಿಸತೊಡಗಿದನು. ಇವನ ಅಂತರಂಗವನ್ನು ಪರೀಕ್ಷಿಸಿ ನೋಡಬೇಕೆಂದು ಕಲ್ಲರಸನು ಕುರುಬನ ವೇಷ ತೊಟ್ಟು ಬಂದು ಲಿಂಗಾಂಗ ಸಾಮರಸ್ಯದ ಸುಖದ ಸೊವಿಮ್ಮನಲ್ಲಿ ಆನಂದಿಸಿ ಮೈಮರೆತಿದ್ದ ಸಕಳೇಶ ಮಾದರಸನ ತಪಸ್ಸನ್ನು ಜರಿಯುತ್ತ "ಇದೆಂತಹ ತಪವು, ಇದನ್ನು ಬಿಡು" ಎಂದು ಹೇಳುತ್ತ ಗಿಡವನ್ನೇರಿ ಅದರ ಎಲೆಗಳನ್ನು ಅವನ ಮೇಲೆ ಸುರಿಸುತ್ತ, ಸಹನೆ ಕೆಡಿಸಿದನು. ಕಣ್ಣು ತೆರೆದ ಸಕಳೇಶ ಮಾದರಸ ಕೋಪೋದ್ದೀಪಿತನಾಗಿ ಶಾಪ ಕೊಡಲು ಹೊರಟನು. ಆಗ ಮಲ್ಲರಸ ನಿಜರೂಪದೋರಿ "ಸಕಳೇಶನೇ ಭಾಪುರೇ, ನಿನ್ನ ಶಮೆ, ದಮೆ, ಶಾಂತಿ ಇದೆಯೋ ? ಕಾಡ ಸೊಪ್ಪು ತಿಂದು ತನುವನ್ನು ಹೀಗೆ ಬಳಲಿಸಲೇಕೆ ? ಮುನಿಕುಲದೊಳಗೆ ನೀನು ಅಗ್ರಜನಾದರೇನು ? ರಾಜಋಷಿಯಾದರೇನು ? ನಿನ್ನ ಮನದ ಹೊಲೆ ಬಿಡದು. ಇಂಥ ತಪದಿಂದೇನು ಪ್ರಯೋಜನ ? ಬಾಹ್ಯ ಲಿಂಗಪೂಜೆಯಿಂದಲೂ ನಿನ್ನ ದ್ರವ್ಯಲೋಭವು

 

ರಾಜನಾಗಿದ್ದು ವಿರಕ್ತಿಯುಂಟಾಗಿ ಶ್ರೀಶೈಲಕ್ಕೆ ಹೆಂಡತಿ ಮಕ್ಕಳೊಡನೆ ಹೊರಟು 'ಅಂಬೆ' ಎಂಬ ಗ್ರಾಮದಲ್ಲಿ ನೆಲೆನಿಂತ ಸಕಲೇಶ ಮಾದರಸ ವೈಭವ, ಸಂಭ್ರಮಗಳಿಂದ ಕೂಡಿದ ಶಿವಲಿಂಗಾರ್ಚನಾದಿಗಳನ್ನು ಮಾಡುತ್ತ ತನ್ನ ರಾಜತೇಜ ಹಾಗೂ ಆಡಂಬರದ ಭಕ್ತಿಗಳಿಂದ ಜನರ ಮನಸ್ಸನ್ನು ಆಕರ್ಷಿಸಿದನು, ಪೂಜಾರ್ಹನೂ ಆದನು. ಆವನನ್ನು ತಮ್ಮ ಮನೆಗೆ ಕರೆದು ಪೂಜೆ ಮಾಡಿಸಿ ಪಾದೋದಕ ಸ್ವೀಕರಿಸುವುದು ಪ್ರತಿಷ್ಠೆಯ ಸಂಗತಿಯೆಂದು ಭಾವಿಸಿದ ಮೂರ್ಖಜನರು ಸಂಖ್ಯೆಯಲ್ಲಿ ಹೆಚ್ಚುತ್ತಾ ಹೋದರು. ತನ್ನ ನಿತ್ಯ ಶಿವಪೂಜೆಗೆ ೧೨ವರಹಗಳನ್ನು ಭಕ್ತರಿಂದ ಸ್ವೀಕರಿಸಿ ಅದನ್ನು ತನ್ನ ಪೂಜಾರ್ಚನಾದಿಗಳಿಗೆ ವಿನಿಯೋಗಿಸುತ್ತಿದ್ದನು. ಬಡ ಭಕ್ತನೋರ್ವನು ಸಕಳೇಶ ಮಾದರಸನನ್ನು ತನ್ನ ಮನೆಗೆ ಆಹ್ವಾನಿಸಿದನು. ಭಕ್ತನ ಮನೆಗೆ ಬಂದ ಗುರುವು ಪೂಜಾದಿ ಕಾರ್ಯಗಳಿಗೆ, ೧೨ ವರಹ ಕೊಡಬೇಕೆಂದು ಕೇಳಿದನು. ಅಷ್ಟು ಹಣವಿಲ್ಲದ ಭಕ್ತ ಗತ್ಯಂತರವಿಲ್ಲದೆ ತನ್ನ ಮಗಳು ಮಾದರಸಿಯನ್ನು ಓರ್ವ ಧನಿಕನಲ್ಲಿ ಒತ್ತೆಯಿಟ್ಟು ಗುರುಸೇವೆ ಮಾಡಿದನು. ಮಾದರಸನಿಗೆ ಈ ಸಂಗತಿ ತಿಳಿದಿದ್ದರೂ ಮೌನದಿಂದಿದ್ದನು. ಒಮ್ಮೆ ಪೂಜಾಕಾಲದಲ್ಲಿ ತನ್ನ ಲಿಂಗಕ್ಕೆ ಧೂಪಾರತಿ ಎತ್ತುವಾಗ ಅದರಿಂದ ಬೆಳಗಿದ ಲಿಂಗದಲ್ಲಿ ಒತ್ತೆಯಾಗಿ ಹೋಗಿದ್ದ ಭಕ್ತನ ಮಗಳ ರೂಪು ಕಾಣಿಸಿತು. 'ಈ ವಿಸ್ಮಯ ಆವನ ಕಣ್ಣು ತೆರೆಸಿತು. 'ಅಯ್ಯೋ, ನಾನು ಮಾಡುವ ಪೂಜೆ ಶಿವಭಕ್ತರ ಮಕ್ಕಳನ್ನು ಮಾರಿಸುವಂತಾಯಿತೆ, ಇತರರನ್ನು ಬಾಧಿಸುವಂತಾಯಿತೆ ?' ಎಂದು ಪಶ್ಚಾತ್ತಾಪಪಟ್ಟು ಇನ್ನು ಈ ಶಿವ ಪೂಜಾ ಭೋಗವು ಬೇಡ ಎಂದು ನಿರ್ಧರಿಸಿ ಶಿವಯೋಗಿ ಕಲ್ಲರಸನಿಂದ ಉಪದೇಶ ಸ್ವೀಕರಿಸಿ ಉಗ್ರ ತಪಸ್ಸಿಗೆ ತೊಡಗಿದನು. 'ಹಠಯೋಗಿ ಯೆಂದು ೧೨ನೇ ಶತಮಾನಕ್ಕಾಗಲೇ ಪ್ರಸಿದ್ಧನಾಗಿದ್ದ[10] ಈತನು ಜಪತಪ ಸಮಾಧಿಗಳ ಫಲದ ಬಗೆಗೆ ಭ್ರಮನಿರಸನಗೊಂಡು ಶಿವಯೋಗದ ಮೂಲಕ ಆತ್ಮಸಾಕ್ಷಾತ್ಕಾರವನ್ನು ಕಂಡುಕೊಂಡನು. ಈತ ತನ್ನ ಅನಿಸಿಕೆಗಳನ್ನು ವಚನಗಳ ಮೂಲಕ ಪ್ರಕಟಪಡಿಸಿರುವನು. ವೈಯುಕ್ತಿಕ ಅನುಭವದ ಮೂಸೆಯಲ್ಲಿ ಕಾಳಿಕೆ ಕಳೆದುಕೊಂಡು ಮಿನುಗಿ ಹೊಮ್ಮಿರುವ ಈತನ ಉಕ್ತಿಗಳು ಬೆಲೆಯುಳ್ಳವಾಗಿವೆ. ಕಾಡಿನಲ್ಲಿ ಪ್ರಾಣಿಗಳಿರುವಂತೆ ಎಲೆಗಳನ್ನು ಮೆದ್ದು ಏಕಾಂತ ವಾಸಿಗಳಾಗಿ, ದಿಗಂಬರರಾಗಿ, ಬ್ರಹ್ಮಚಾರಿಗಳಾಗಿ, ಶೀರ್ಷಾಸನ ಹಾಕಿ—ಇಷ್ಟೆಲ್ಲಾ ಕಷ್ಟಪಟ್ಟು ನಿಜವನ್ನರಿಯಲಾಗದ ತಪಸ್ವಿಗಳು ಬರಿಯ ವೇಷಧಾರಿಗಳಷ್ಟೇ ! ಪ್ರಾಣಿ

---

ಹೋಗಲಿಲ್ಲ. ತಪದಿಂದಲೂ ನಿನ್ನ ಸಿಟ್ಟು ಹೋಗಲಿಲ್ಲ. ಈ ಮಾರ್ಗಗಳನ್ನು ಬಿಟ್ಟು ಕೊಟ್ಟು, ಶಿವಶರಣರ ಲಿಂಗತ್ರಯದ ರೀತಿಯನ್ನು ತಿಳಿದುಕೋ, ಶಿವಾನುಭವಕ್ಕೆ ತಲೆವಾಗು" ಎಂದು ಎಚ್ಚರಿಸಿದನು.

10. ನೋಡಿ : ಶ್ರೀ ಸಿದ್ಧರಾಮೇಶ್ವರ ವಚನಗಳು (ಸಂ : ಡಾ॥ ಆರ್. ಸಿ. ಹಿರೇಮಠ), ವ. ೧೦೬೨.

ಗಳಿಗೂ ಇವರಿಗೂ ವ್ಯತ್ಯಾಸವೇನು ?11 ಎಂಬ ಇವನ ಅಭಿಪ್ರಾಯವನ್ನೇ ವಿವೇಚಿಸಿದಾಗ ಮಾತು ಒರಟಾಗಿದ್ದರೂ ಅನುಭವ ಸಾಚಾತನದಿಂದ ಕೂಡಿರುವಂತೆ ಭಾಸವಾಗುತ್ತದೆ. ಯೋಗಿ, ಜೋಗಿ, ತಪಸಿ, ಸನ್ಯಾಸಿ, ನರಮೀಮಾಂಸಕ, ನೀಲಪಟ— ಇವರೇ ಮೊದಲಾದವರು ತಮ್ಮ ಹಸಿವೆಯ ಕಾರಣ ಜನರ ಮುಂದೆ ಕಾಣಿಸಿಕೊಳ್ಳುವರು. ಇವರು ತಾವು ಕರಗತ ಮಾಡಿಕೊಂಡಿದ್ದನ್ನು ಪ್ರದರ್ಶಿಸಿ, ಇಲ್ಲವೆ ಇತರರಿಗೆ ಕಲಿಸಿ ಜೀವಧಾರಣ ಮಾಡುವ ವ್ಯವಹಾರಿಗಳು. ದೇವನು ನಿರ್ಲೇಪ ಭಕ್ತಿಯುಳ್ಳವರನ್ನಲ್ಲದೆ ತೋರಿ ಮಾರಿಯುಂಬ ವ್ಯವಹಾರಿ ತಪಸಿಗಳನ್ನು ಮೆಚ್ಚುವವನಲ್ಲ.12 ಮೈಮುರಿದು ದುಡಿದು ಗಳಿಸಲಾರದೆ ಮೈಗಳ್ಳತನದಿಂದ ಅನ್ನ ಗಳಿಸಲಾರದೆ ತಪಸಿಗಳು ಹಸಿದಿರುವರು. ಉಡಲು ವಸ್ತ್ರ ಗಳಿಸಲಾರದೆ ಕೌಪೀನ ಕಟ್ಟಿಕೊಂಡಿರುವರು. ಸ್ನಾನಕ್ಕೆ ಎಣ್ಣೆಯಿಲ್ಲ. ಎಣ್ಣೆಯನ್ನು ಗಳಿಸಲಾರದೆ ತಲೆ ಬೋಳು ಮಾಡಿಸಿಕೊಂಡಿರುವರು.13 ಹೆಣ್ಣಿನ ಮೊಲೆ, ಮುಡಿ, ಬಳುಕುವ ಸೊಂಟ, ಮುದ್ದುಮೊಗಗಳನ್ನು ಕಂಡು ಬ್ರಹ್ಮಚಾರಿಯಾದಡೇನು ಮನದಿ ಅಳುಪದಿಪ್ಪನೇ ? ಸಕಳೇಶ್ವರದೇವನು ಅರ್ಧನಾರಿಯಲ್ಲವೇ?14 ಹೀಗೆ ತಪಸ್ವಿಗಳ ತಪಸ್ಸಿನ ನಿರರ್ಥಕತೆಯುನ್ನು, ಸಟೆಯುನ್ನು ತನ್ನ ಹರಿತವಾದ ಮಾತುಗಳಿಂದ ವ್ಯಂಗ್ಯವಾಡಿರುವನು.

ಗೋರಕ್ಷ ಮೊದಲಾದ ನವನಾಥ ಸಿದ್ಧರ ಕಾಪಾಲಿಕಾಚರಣೆಗಳನ್ನು ಪ್ರಭುವೇ ಆದಿಯಾದ ಶಿವಶರಣರು ತಿರಸ್ಕರಿಸಿರುವರು. ಅಸಹ್ಯಕರವಾದ ಅವರ ಜಡಸಿದ್ಧಿಯ ಮಾರ್ಗವನ್ನು ತೀರಾ ಕಟುವಾಗಿ ಪ್ರಭುವು ಟೀಕಿಸಿರುವನು :

ಹಠಯೋಗ ಲಂಬಿಕೆಯೆಂದು, ಅಕುಂಚನವೆಂದೂ,
ವಜ್ರ ಅಮರಿಯ ಕಲ್ಪವೆಂದು,
ಮಲಮೂತ್ರಂಗಳ ಸೇವಿಸುತ್ತ,
ಇದು ಪೂರ್ವ ನವನಾಥಸಿದ್ಧರ ಮತೋಕ್ತವೆಂದು
ಕಾಪಾಲಿಕಾಚರಣೆಯುನಾಚರಿಸುವವರಲ್ಲ ಶರಣರು !
ಮೇಣು ತಲೆಯೊಳಗಣ ವಾತ ಪಿತ್ಥ ಶ್ಲೇಷ್ಮವ ತೆಗೆದು,
ಅಮೃತವೆಂದು ಬಿನುಗು ದೃಷ್ಟವ ತೋಱುವರಲ್ಲ ಶರಣರು !

---

11. ಸಕಳೇಶ ಮಾದರಸರ ವಚನಗಳು (ಸಕಲಪುರಾತನರ ವಚನಗಳು, ಸಂಪುಟ ೨. ಸಂ : ಡಾ॥ ಆರ್. ಸಿ. ಹಿರೇಮಠ), ಪು. ೫೯೦, ವ. ೧೬೪೮.

12. ಅದೇ, ಪು. ೫೯೧, ವ. ೧೯೫೨.

13. ಅದೇ, ಪು. ೫೯೧, ವ. ೧೬೫೬.

14. ಅದೇ, ಪು. ೫೯೦, ವ. ೧೬೪೮.

ದ್ರವಿಸುವ ದೇಹದಲ್ಲಿ ಅಪ್ಪುವಿನ ಫಲರಸಕ್ಷೀರಘೃತ ಮೊದಲಾದವ ಸೇವಿಸುತ್ತ,
ಅನ್ನವ ಜಿಟ್ಟೆವೆಂಬ ಭೂತಚೇಷ್ಟಕರಲ್ಲ ಶರಣರು.
ಇಂತಿವೆಲ್ಲವು ಕಾಕು ಸಟೆ ಭ್ರಾಂತೆಂದು ತಿಳಿದು ನಿರ್ಧರ ನಿಜದಿ ನಿಂದರು :
ಗುಹೇಶ್ವರಾ, ನಿಮ್ಮ ಶರಣರು ಅಗ್ರಗಣ್ಯರು.15

ಯೋಗಾಸನ ಬಲ್ಲಿದರು, ಭಸ್ಮಧಾರಿಗಳು, ಮಂತ್ರೋಚ್ಚಾರಕರು ಸಾವನ್ನು ಗೆಲ್ಲಲಾಗುವುದೇ ? ತಾಪಸಿಗಳು ನಿಜವನ್ನು ಮರೆತು, ಸಟೆಯನ್ನು ಒಪ್ಪಿ–ಅಪ್ಪಿ ಸತ್ತರು16 ಎನ್ನುವ ಪ್ರಭು, ಹಸಿವು ತೃಷೆಗಳನ್ನು ಗೆಲ್ಲುವ ಮೂಲಕ, ಮಲ ಮೂತ್ರಾದಿಗಳನ್ನು ಬಂಧಿಸುವುದರ ಮೂಲಕ, ಉಸಿರ ಕಟ್ಟುವ ಮೂಲಕ ಯೋಗಿಗಳಾದೆವು, 'ಮಾಯೆ' ಯನ್ನು ಗೆದ್ದೆವು ಎನ್ನುವವರನ್ನೂ ಒಪ್ಪುವುದಿಲ್ಲ. ಅಂತಹವರೂ ಅವನ ಕಠಿನವಾದ ಆಕ್ಷೇಪಣೆಗೆ ಗುರಿಯಾಗಿರುವರು :

ಕೊಂಡ ಆಹಾರದ ರಸವ ಕಟ್ಟಿ ಯೋಗಿಗಳಾದೆವೆಂಬ
ಭಂಡರು ನೀವು ಕೇಳಿರೊ.
ಜೋಡು ದೇಹದ ಮಲಿನವ ಕಟ್ಟಿ ಮಾಯೆಯ ಗೆದ್ದಿಹೆವೆಂಬರು!
ಬಿಂದುವಿನ ಸಂಚವನಿವರೆತ್ತ ಬಲ್ಲರು?
ಮನದ ಮಲಿನವೆ ಮಾಯೆ,
ಮನದ ಸಂಚವೆ ಬಿಂದು,
ಇಂತಪ್ಪ ಬಿಂದುವ ಕಟ್ಟಿ ಮಾಯೆಯ ಗೆಲಲರಿಯದವರು
ಅವರೆತ್ತಣ ಯೋಗಿಗಳು ಗುಹೇಶ್ವರಾ."17

ಏಕಾಂತವಾಸವನ್ನರಸಿ ಹೋಗುವ ತಪಸಿಗಳನ್ನು "ನದಿವಾಸಿಗಳು, ವನವಾಸಿಗಳು, ಗಿರಿವಾಸಿಗಳು, ಗುಹೆವಾಸಿಗಳು, ಇಂದ್ರಿಯ ಭಯಗಳಿಗಂಜಿ ಕಂದಮೂಲಂಗಳ ಭಕ್ಷಿಸುವ ಕಾನನದ ಮರುಳುಗಳು........ಭ್ರಾಂತರು"18 ಎಂದು ಶೋಂಟದ ಸಿದ್ಧಲಿಂಗಯತಿಯು ಹಾಸ್ಯಮಾಡಿರುವನು. ಪರವಸ್ತುವಾದ ಮಹಾಘನವನ್ನು ತಿಳಿಯಲು ನಾನಾ ಬಗೆಯಲ್ಲಿ ಪ್ರಯತ್ನಿಸಿದರೂ ಅದು ವ್ಯರ್ಥವೆ. ಲಿಂಗಮ್ಮ ಹೇಳುವಂತೆ ನಿಶ್ಚಿಂತನಾದವನಿಗೆ ಯಾರ ಹಂಗೂ ಇರುವುದಿಲ್ಲ; ಚಿತ್ತ ಸುಯಿದಾನವಾದವನಿಗೆ ತತ್ತ್ವವ ಕಾಣಬೇಕೆಂಬುದಿಲ್ಲ; ತಾನು ತಾನಾದವನಿಗೆ ಮಾನವರ ಹಂಗಿಲ್ಲ; ಭಾವ ಬಯಲಾದವನಿಗೆ ಬಯಕೆಯೆಂಬು

---

15. ವ್ಯೋಮಮೂರುತಿ ಅಲ್ಲಮ ಪ್ರಭುದೇವರ ವಚನಗಳು (ಸಂ : ಡಾ॥ ಆರ್. ಸಿ. ಹಿರೇಮಠ, ಡಾ॥ ಎಂ. ಎಸ್. ಸುಂಕಾಪುರ), ವ. ೧೧೦೪.
16. ಅದೇ, ವ. ೨೨೪.
17. ಅದೇ, ವ. ೧೨೫೦.
18. ಷಟ್ಸ್ಥಲಜ್ಞಾನಸಾರಾಮೃತ (ಸಂ: ಡಾ॥ ಆರ್. ಸಿ. ಹಿರೇಮಠ), ವ. ೪೫೯.

ದಿಲ್ಲ; ಪರಬ್ರಹ್ಮದ ಗೊತ್ತ ಕಂಡವನಿಗೆ ಅತ್ತಿತ್ತ ಅರಸಬೇಕಾದ ಪ್ರಮೇಯವೇ ಇಲ್ಲ.19 ಪರಬ್ರಹ್ಮನ ಸಾಕ್ಷಾತ್ಕಾರಕ್ಕೆ ಹಲವಾರು ಮಾರ್ಗಗಳನ್ನು ಅನುಸರಿಸುವ ಪ್ರಯತ್ನ, 'ಬಂಡಿಯ ಮೇಗಣ ಹೆಳವನಂತೆ ಕಂಡಕಂಡ ಕಡೆಗೆ ಹಲುಬಿದಡೆ'20 ಹೇಗೆ ವ್ಯರ್ಥವೊ ಹಾಗೆ ವ್ಯರ್ಥ. ಕರ್ತೃವನ್ನು ಅಥವಾ ಪರವಸ್ತುವನ್ನು ಕಾಣಲು ಕಾಡಿಗೆ ಹೋಗಬೇಕಾದುದಿಲ್ಲ. ಕಠಿನ ತಪಸ್ಸು ಮಾಡಬೇಕಾದ್ದಿಲ್ಲ, ದೇಹವನ್ನು ದಂಡಿಸಬೇಕಾದುದಿಲ್ಲ. ಇರುವಲ್ಲಿಯೇ ಚಿತ್ತವನ್ನು ಶುದ್ಧವಿಟ್ಟರೆ ಸಾಕು. ಕರ್ತೃವನ್ನು ಅರಸಲು ಚಿತ್ತ ಹೇಗಾಗಬೇಕೆಂದರೆ—'ಜಲದೊಳಗಣ ಸೂರ್ಯನ ಪ್ರತಿಬಿಂಬದಂತಿರಬೇಕು.21 ಮೋಡವಿಲ್ಲದ ಚಂದ್ರಮನಂತಿರಬೇಕು. ಬೆಳಗಿದ ದರ್ಪಣದಂತಿರಬೇಕು.' ಹೀಗಲ್ಲದಿದ್ದರೆ ಆ ಕರ್ತೃವಿನ ನೆಲೆ ಕಾಣಲಾಗದು. ಪರಮಾತ್ಮನನ್ನು ಕಾಣಲು ಮನಸ್ಸನ್ನು ನಿರ್ಮಲ ಮಾಡುತ್ತೇನೆಂದು ಹೊರಟವನನ್ನು ಬೇರೊಂದು ರೂಪದಲ್ಲಿ ಆ ಮನವೇ ಕಾಡುವುದು. "ಮನವ ತೊಳೆದು ನಿರ್ಮಲವ ಮಾಡಿಹೆನೆಂಬ ಯೋಗವೆಂತುಟೊ? ಮನವ ಹಿಡಿದು ತಡೆದಿಹೆನೆಂಬವರ ಮರುಳಾಗಿ ಕಾಡಿತ್ತು ನೋಡಾ ಮನವು! ಮನ ವಿಕಲ್ಪರೂಪ ಜ್ಞಾನದಿಂದಱಿದು ಅದ ಶುದ್ಧವ ಮಾಡಿಹೆನೆಂಬುದು ತಾನೇ ಮನ ನೋಡಾ...."22 ಎಂಬ ಪ್ರಭುವಿನ ಅನುಭವದ ನುಡಿ ಮನನೀಯವಾಗಿದೆ.

ತನ್ನನ್ನು ತಾನು ಅರಿಯುವುದು ಆತ್ಮಸಾಕ್ಷಾತ್ಕಾರಕ್ಕೆ ಮೊದಲ ಹೆಜ್ಜೆ. 'ಅಱಿತಡೆ ಶರಣ ಮಱೆತಡೆ ಮಾನವ'; 'ತನ್ನ ತಾ ತಿಳಿದಲ್ಲಿ ಎರಡನೆಯ ಶಂಭುವೆನಿಸಿದ, ತನ್ನ ತಾ ಮಱೆದಲ್ಲಿ ಮಹೀತಳದ ಮಾನವನೆನಿಸಿದ' ಎಂಬ ಬಸವ, ಸಿದ್ಧರಾಮರ ಮಾತುಗಳಲ್ಲಿ ಮಾನವ ದೇವನಾಗುವ, ಮಾನವ ಮಾನವನಾಗಿಯೇ ಉಳಿಯುವ ಸಾಧ್ಯತೆಗಳ ಇತಿ–ಮಿತಿ ಕಾಣಬರುತ್ತದೆ. ಮಾನವ ತನ್ನಲ್ಲಿ ಅವ್ಯಕ್ತವಾಗಿರುವ ಶಿವಾಂಶವನ್ನು ಅರಿಯಲು ಪ್ರಭು ಹೇಳುವಂತೆ ಮಣಿಯನೆಣಿಸಿ ಕಾಲವ ಕಳೆಯಬೇಕಿಲ್ಲ, ಕಣಿಯ ಪೂಜಿಸಿ ಕಾಲವ ಕಳೆಯಬೇಕಿಲ್ಲ,23 ತಲೆಯೂರಿ ತಪಸ್ಸು ಮಾಡಿದಡಿಲ್ಲ,24 ಸುತ್ತಿ ಸುತ್ತಿ ಬಳಲಬೇಕಿಲ್ಲ, ಲಕ್ಷ ಗಂಗೆಯ ಮೀಯಬೇಕಿಲ್ಲ, ತುಟ್ಟತುದಿಯ ಮೇರುಗಿರಿಯ ಮೆಟ್ಟಿ ಕೂಗಬೇಕಿಲ್ಲ, ನಿತ್ಯನೇಮಗಳಿಂದ ತನುವನ್ನು ದಂಡಿಸಬೇಕಿಲ್ಲ. ನಿತ್ಯವೂ ನೆನೆವ ಮನವನ್ನು, ಅಂಪೇದಿಗೆ ಇತ್ತಲಿತ್ತ ಹರಿವ

---

19. ಶಿವಶರಣೆಯರ ವಚನಗಳು (ಸಂ : ಡಾ॥ ಆರ್. ಸಿ. ಹಿರೇಮಠ), ಪು. ೨೪೩, ಪ.೩೭.
20. ಅದೇ, ಪು. ೨೪೨' ವ. ೩೬.
21. ಅದೇ, ಪು. ೨೩೩, ವ. ೧೨.
22. ವ್ಯೋಮಮೂರುತಿ ಅಲ್ಲಮ ಪ್ರಭುದೇವರ ವಚನಗಳು : (ಸಂ. ಡಾ॥ ಆರ್. ಸಿ. ಹಿರೇಮಠ, ಡಾ॥ ಎಂ. ಎಸ್. ಸುಂಕಾಪುರ), ವ. ೧೧೮೬.
23. ಅದೇ, ವ. ೧೦೧೧.
24. ಅದೇ, ವ. ೧೦೨೪.

ಮನವನ್ನು ಚಿತ್ತದಲ್ಲಿ ಒಂದೆಡೆ ನಿಲಿಸ ಬಂದರೆ 'ಗುಹೇಶ್ವರ ಲಿಂಗವು ಬಚ್ಚ ಬಱಿಯ ಬೆಳಗು.'25 ಮಹಾಘನವನ್ನು ಕಾಣಲು ಲಿಂಗಮ್ಮ ಹೇಳುವಂತೆ "ಹಸಿವು ಕೆಡಬೇಕು; ತೃಷೆಯಡಗಬೇಕು ; ವ್ಯಸನ ನಿಲ್ಲಬೇಕು ; ನಿದ್ರೆ ಹಱಿಯಬೇಕು ; ಜೀವನ ಬುದ್ಧಿ ಹಿಂಗಬೇಕು ; ಮನ ಪವನ ಬಿಂದು ಒಂದುಗೂಡಬೇಕು ; ಚಿತ್ತ ಒತ್ತಟ್ಟಿಗೆ ಹೋಗ ದಿರಬೇಕು; ಹೊತ್ತು ಹೊತ್ತಿಗೆ ಉತ್ತರವನೇಱಿ ಬೆಚ್ಚು ಬೇರಿಲ್ಲದೆ ಲಿಂಗದೊಳಗೆ ಅಚ್ಚೊತ್ತಿದಂತೆ ಬೆರೆದೆಡೆ, ಕತ್ತಲೆ ಹಱಿವುದು, ಮಱವೆ ಹಿಂಗುವುದು, ನಿದ್ರೆ ಹಱಿವುದು, ಹಸಿವು ಕೆಡುವುದು, ತೃಷೆಯಡಗುವುದು, ವ್ಯಸನ ನಿಲ್ಲುವುದು. ಇವೆಲ್ಲವ ಹಿಂಗಿಸಿ ತಾ ಲಿಂಗವ್ಯಸನಿಯಾಗಬಲ್ಲಡೆ, ಮುಂದೆ ಮಹಾಮಂಗಳದ ಬೆಳಗು ಕಾಣಿಪುದು...."26

ವಚನಕಾರರು ವಿಶ್ವಾತ್ಮನ ಉಪಾಸಕರು. ಆ ವಿಶ್ವಾತ್ಮನು "ನೆಲದ ಮಱೆಯ (ಲಡಗಿದ) ನಿಧಾನದಂತೆ, ಮುಗಿಲ ಮಱೆಯಲಡಗಿದ ಮಿಂಚಿನಂತೆ, ಬಯಲ ಮಱೆಯಲಡಗಿದ ಮರೀಚಿಯಂತೆ, ಕಂಗಳ ಮಱೆಯಲಡಗಿದ ಬೆಳಗಿನಂತೆ"27 ಅವ್ಯಕ್ತನು. ದೃಷ್ಟಿಗಮ್ಯನಲ್ಲ, ಭಾವಗಮ್ಯ. ಅವನು, ಮಹದೇವಿಯಕ್ಕ ಹೇಳುವಂತೆ, ಬಹಿರಂಗವ್ಯವಹಾರ ದೂರಸ್ಥನು, ವಾಙ್ಮನಕ್ಕತೀತನು, ನಾದಾತೀತನು, ಮತಿಗತೀತನು, ಸರ್ವಾಂಗ ಪರಿಪೂರ್ಣನು.28 ಈ 'ಪರವಸ್ತು'ವೇ ಶ್ರೀ ಗುರುವಿನ ಮೂಲಕ ಭಕ್ತನಾದವನಿಗೆ ಇಷ್ಟಲಿಂಗ ರೂಪದಲ್ಲಿ ಅನುಗ್ರಹಿತವಾಗಿರುತ್ತದೆ. ವಚನಕಾರರು ನಿರಾಕಾರನೂ ನಿರ್ಗುಣನೂ ನಾಮರೂಪ ಕ್ರಿಯೆಗಳಿಗೆ ಒಳಗಾಗದವನೂ ಆದ ಈ ಪರಬ್ರಹ್ಮನನ್ನು ಲಿಂಗರೂಪದಲ್ಲಿ ಉಪಾಸಿಸಿರುವರು. ಈ ಪರಾತ್ಪರ ವಸ್ತುವೇ 'ಕರಸ್ಥಲಕ್ಕೆ ಬಂದು ಚುಳುಕಾಗಿ'ರು29ವನೆಂದೂ, 'ಕರಸ್ಥಲವನಿಂಬು ಗೊಂಡಿರುವ'30ನೆಂದೂ ನಂಬಿರುವರು. ವಚನಕಾರರು ಏಕದೇವೋಪಾಸಕರು. ಆ ದೇವ ಕಲ್ಲು, ಮಣ್ಣು, ಕಟ್ಟಿಗೆ, ಲೋಹಗಳ ದೈವವಲ್ಲ. ಆ ದೇವ, 'ಭಾವದ ಮಱೆಯ ಬ್ರಹ್ಮವಾಗಿಪ್ಪ'31ನು. ಪ್ರಕೃತಿಯಲ್ಲಿ ಈಳೆ-ನಿಂಬೆ-ಮಾವು-ಮಾದಲ ಫಲಗಳು ಹುಳಿ; ಕಬ್ಬು-ಬಾಳೆ-ನಾರಿವಾಳಗಳು ಸಿಹಿ; ಕಳವೆ-ಶಾಲಿಗಳು ರುಚಿ;

---

25. ಅದೇ, ವ. ೩೫೧.
26. ಶಿವಶರಣೆಯರ ವಚನಗಳು (ಸಂ : ಡಾ॥ ಆರ್. ಸಿ. ಹಿರೇಮಠ), ಪು. ೨೪೦, ವ. ೩೧.
27. ಶೂನ್ಯಸಂಪಾದನೆ ಅಲ್ಲಮ ಪ್ರಭುದೇವರ ವಚನಗಳು (ಸಂ : ಡಾ॥ ಆರ್. ಸಿ. ಹಿರೇಮಠ, ಡಾ॥ ಎಂ. ಎಸ್. ಸುಂಕಾಪುರ), ವ. ೪.
28. ಅಕ್ಕನ ವಚನಗಳು (ಸಂ : ಡಾ॥ ಎಲ್. ಬಸವರಾಜು), ವ. ೧೦.
29. ಅದೇ, ವ. ೩.
30. ಅದೇ, ವ. ೯.
31. ಅದೇ, ವ. ೨.

ಮರುಗ-ಮಲ್ಲಿಗೆ-ಪಚ್ಚೆ-ಮುಡಿವಾಳಗಳು ಮಧುರ; ಎಲ್ಲವೂ ಪ್ರಕೃತಿಯ ಉದಾರ ಕೊಡುಗೆ. ಆದರೆ ಇವುಗಳ ಗುಣಗಳು ಒಂದರಿಂದ ಮತ್ತೊಂದು ಭಿನ್ನ. ಇವುಗಳು ಆಧರಿಸಿರುವ ನೆಲ-ಜಲ-ಭಾನು ಒಂದೆ! ಪ್ರಕೃತಿ ತನ್ನಲ್ಲಿ ಎಲ್ಲ ಭಿನ್ನಗುಣಗಳನ್ನೂ ಗರ್ಭೀಕರಿಸಿಕೊಂಡು ಆಯಾ ದ್ರವ್ಯಗುಣವನ್ನು ಭಿನ್ನ ಭಿನ್ನ ರೂಪಗಳಲ್ಲಿ ವ್ಯಕ್ತಪಡಿಸುತ್ತದೆ. ಹಾಗೆಯೇ ಪರಮಾತ್ಮನ ವಿಶ್ವವ್ಯಾಪ್ತಿತ್ವ.32 ವಿಶ್ವವ್ಯಾಪಿ ಪರಮಾತ್ಮ ಒಬ್ಬನೆ. ಅವನ ರೂಪು ಬೇರೆಬೇರೆ! ಬಸವಣ್ಣನ 'ದೇವನೊಬ್ಬ ನಾಮ ಹಲವು'; ಪ್ರಭುವಿನ '........ಒಂದು ಮುಖದಲ್ಲಿಪ್ಪ ದೇವನೊಬ್ಬನೆ. ಹಲವು ಮುಖದಲ್ಲಿಪ್ಪ ದೇವನೊಬ್ಬನೇ. ನಾಮ ಹಲವಲ್ಲದೆ ಕಾರ್ಯ ಒಂದೆ'33 ಎಂಬ ವಿಚಾರಸರಣಿಯನ್ನು ವಿವೇಚಿಸಿದಾಗ ಇದು ಅವರ ಕಾಲದ ವಿಚಾರವಂತರ ಒಟ್ಟು ಧೋರಣೆಯಾಗಿರುವಂತಿದೆ. ವಿಶ್ವದ ಎಲ್ಲೆಡೆ ಪರಮಾತ್ಮ ವ್ಯಾಪಿಯಾಗಿರುವಂತೆ ಪ್ರತಿಯೋರ್ವನಲ್ಲೂ ಅವ್ಯಕ್ತನಾಗಿ ಪರಮಾತ್ಮ ನೆಲೆಸಿರುವನು. ತನ್ನಲ್ಲಿರುವ ದೈವಾಂಶವನ್ನು ತಿಳಿಯಲು 'ಅರಿವು' ಮುಖ್ಯ ಸಾಧನ. ಈ ಅರಿವು (ಸುಜ್ಞಾನ) ಗುರುವಿನಿಂದ ಲಭ್ಯ. ಇಷ್ಟಲಿಂಗವು ಅವ್ಯಕ್ತನಾದ ಪರಮಾತ್ಮನನ್ನು ಕಾಣಲು ಒಂದು ಮಾಧ್ಯಮ. ತನ್ನನ್ನು ತಾನು ಅರಿಯುವುದು ಅಂದರೆ ತನ್ನಲ್ಲಿರುವ ಪರಬ್ರಹ್ಮಸ್ವರೂಪೀ ಅಂಶವನ್ನು ಮನಗಾಣುವುದು. ಹಾಗೆ ಮನಗಂಡಾಗ ದೇವ-ಜೀವ ಎಂಬ ದ್ವೈತ ಭಾವವು ನೀಗಿ, ಅದ್ವೈತ ಭಾವವು ನೆಲೆಗೊಳ್ಳುತ್ತದೆ. ವಚನಕಾರರು ಜೀವನ ಆ ಅದ್ವೈತ ಸ್ಥಿತಿಯನ್ನು ಷಟ್‌ಸ್ಥಲದ ಕೊನೆಯ ಮೆಟ್ಟಿಲಾದ ಐಕ್ಯಸ್ಥಿತಿಯಲ್ಲಿ ಹೇಳಿರುವರು.

ಲಿಂಗಾಂಗ ಸಾಮರಸ್ಯವನ್ನು ಪ್ರತಿಪಾದಿಸಿರುವ ವಚನಕಾರರು ಅದನ್ನೇ ಪಾರಿಭಾಷಿಕವಾಗಿ 'ಶಿವಯೋಗ'ವೆಂದು ಕರೆದಿರುವರು. ಇದನ್ನು ತಮ್ಮ ಬದುಕಿನಲ್ಲಿ ಅನುಷ್ಠಾನಕ್ಕೆ ತಂದುದರಿಂದಲೇ ಅವರೆಲ್ಲರೂ ಶಿವಯೋಗಿಗಳು. ವಚನಕಾರರು 'ಇಹ' ಜೀವಿಗಳು. ಸಂಸಾರಿಗಳು. ಸಂಸಾರದಲ್ಲಿದ್ದೂ ಅದರ ಸೊಬಗು, ನಲಿವು, ಸಿಹಿ-ಕಹಿಗಳನ್ನು ಕಂಡು ಉಂಡವರು. ಅವರ ವಿರಕ್ತರಾಗಿ, ಹೆಣ್ಣು-ಮಣ್ಣು-ಹೊನ್ನುಗಳ ಪಾಶದಿಂದ ಮುಕ್ತರಾಗಲು, ಅರಿಷಡ್ವರ್ಗಗಳ ಕೋಟಲೆಯಿಂದ ಪಾರಾಗಲು ಏಕಾಂತವನ್ನರಸಿ ಪಲಾಯನವಾದಿಗಳಾಗಿ ಕಾಡು, ಮೇಡು, ಬೆಟ್ಟಗುಡ್ಡ, ಜಲಾಶಯ ಸ್ಥಾನಗಳನ್ನರಸಿ ಹೊರಟವರಲ್ಲ. ಕಾಣದ ದೈವದ ಸಾಕ್ಷಾತ್ಕಾರಕ್ಕೆ ಸಂಸಾರವನ್ನು ದೂರಿ ಹೊರಡದೆ ಸಂಸಾರದಲ್ಲಿದ್ದುಕೊಂಡೇ 'ಪರಮ' ನನ್ನು ಕಾಣಲು ಸಾಧನೆ ನಡೆಸಿದರು. ಇವರ ಸಾಧನೆಗೆ ಷಟ್ಸ್ಥಲ, ಪಂಚಾಚಾರಗಳು ಮೆಟ್ಟಿಲುಗಳಾದುವು. ಅಷ್ಟಾವರಣಗಳು

---

32. ಅದೇ, ವ ೩.

33. ವ್ಯೋಮಮೂರುತಿ ಅಲ್ಲಮ ಪ್ರಭುದೇವರ ವಚನಗಳು (ಸಂ: ಡಾ॥ ಆರ್. ಸಿ. ಹಿರೇಮಠ, ಡಾ॥ ಎಂ. ಎಸ್. ಸುಂಕಾಪುರ), ವ. ೧೮೯೩.

ರಕ್ಷಾಕವಚಗಳಾದುವು. ಪ್ರಚಲಿತವಿದ್ದ ಅಷ್ಟಾಂಗಯೋಗ, ಅಂಬಿಕಾಯೋಗ, ಹಟ ಯೋಗ, ಪವನಯೋಗ, ಲಯಯೋಗ, ಮಂತ್ರಯೋಗ, ರಾಜಯೋಗಗಳನ್ನು ಒಪ್ಪದೆ 'ಲಿಂಗಾಂಗ ಸಾಮರಸ್ಯಪ್ರಧಾನವಾದ ಶಿವಯೋಗವನ್ನು ಪ್ರಭು, ಚನ್ನಬಸವಣ್ಣ, ಸಿದ್ಧರಾಮ ಮೊದಲಾದವರು ವಿಶಿಷ್ಟವಾಗಿ ಪ್ರತಿಪಾದಿಸಿ, ಅದಕ್ಕೆ ಒಂದು ಸ್ಪಷ್ಟವಾದ ರೂಪುರೇಷೆಯನ್ನು ತಮ್ಮ ವಚನಗಳ ಮೂಲಕ ಒದಗಿಸಿಕೊಟ್ಟಿರುವರು. ೧೨ನೇ ಶತಮಾನದ ವಚನಕಾರರು ಕಾಡಿಗೆ ಹೋಗದೆ ಸಂಸಾರದಲ್ಲಿದ್ದೇ ಸಾಧನೆ ನಡೆಸಿದ ಯೋಗಿಗಳು. ಕಲ್ಯಾಣದಲ್ಲಿ ನೆರೆದ ಶರಣರ ಸದ್ಗೋಷ್ಠಿಯು ಇಹದಲ್ಲೇ ಇದ್ದು ಪರವನ್ನು ಸಾಧಿಸುವ ಸುಲಭ ಮಾರ್ಗವನ್ನು ಚಿಂತಿಸಿತು ; ಅನುಭಾವ ಗೋಷ್ಠಿಯಲ್ಲಿ ಮಥಿಸಿತು ; ಆತ್ಮ ಕಲ್ಯಾಣದ ನೂತನ ವಿಧಾನವನ್ನು ಕಂಡುಕೊಂಡಿತು. ಹೀಗೆ ವಚನಕಾರರು 'ಶಿವಯೋಗ'ದ ಹರಿಕಾರರಾದರು.



# ವಚನಕಾರರು ಹಾಗೂ ಮಾಸ್ತಿ

'ಮಹಾಸತಿ' ಶಬ್ದದ ಸಂಕ್ಷಿಪ್ತರೂಪ ಮಾಸ್ತಿ. ಮಾಸ್ತಿ ಕಲ್ಲುಗಳು ಕರ್ನಾಟಕದ ಸಾಂಸ್ಕೃತಿಕ ಇತಿಹಾಸದ ವಿಶಿಷ್ಟ ದಾಖಲೆಗಳಾಗಿವೆ. ವೀರನೊಬ್ಬನು ವೀರೋಚಿತವಾಗಿ ಹೋರಾಡಿ ಮರಣವನ್ನಪ್ಪಿದಾಗ ಗಂಡನ ಸಾವಿನ ಸುದ್ದಿ ತಿಳಿದ ಅವನ ಸತಿ ಅಗ್ನಿಪ್ರವೇಶ ಮಾಡಿ ತಾನೂ ಸಾವನ್ನಪ್ಪುತ್ತಿದ್ದಳು. ಗಂಡನೊಡನೆ ಚಿತೆಯನ್ನೇರುವುದು ಸಹಗಮನವಾದರೆ, ಬೇರೆಲ್ಲೋ ಗಂಡ ಸತ್ತಾಗ ತಾನಿರುವ ಎಡೆಯಲ್ಲೇ ಮುತ್ತೈದೆಯಾಗಿ ಚಿತೆಯೇರುವುದು ಅನುಗಮನ. ಈ ಬಗೆಯ ಆತ್ಮಾರ್ಪಣೆ ೯–೧೦ನೇ ಶತಮಾನದ ಸಾಮಾಜಿಕ ಜೀವನದಲ್ಲಿ ಸಾಧಾರಣ ಸಂಗತಿ. ಜೋಳದ ಪಾಳಿಗಾಗಿ ತನ್ನ ಪ್ರಾಣವನ್ನು ಹುಲ್ಲಿಗಿಂತ ಕಡೆಯಾಗಿ ಎಣಿಸಿ ರಣಾಂಗಣದಲ್ಲಿ ಕಲಿತನವನ್ನು ಮೆರೆದು ಮರಣವನ್ನಪ್ಪಿದ ವೀರನನ್ನು ಪಡೆಯಲು ಸ್ವರ್ಗದ ಸುಂದರಾಂಗಿಯರು ಬಯಸಿ ಬಯಸಿ ಮೇಲ್ವಾಯ್ದು ಬರುವರೆಂಬುದು ಪ್ರಚಲಿತವಿರುವ ಕಥೆ.1 ತಮ್ಮ ಪತಿಯನ್ನು ಸ್ವರ್ಗದ ಸುಂದರಿಯರು ಪಡೆಯುವುದಕ್ಕೆ ಮುನ್ನವೇ ತಾವು ಗಂಡನೊಡನೆ ಸ್ವರ್ಗದಲ್ಲಿ ಕೂಡಬೇಕು ಎಂಬ ಸ್ವಭಾವಸಹಜವಾದ ಸ್ತ್ರೀಬುದ್ಧಿ ಬಹುಶಃ ಚಿತೆಯೇರಲು ಪ್ರೇರಣೆ ನೀಡಿರಬಹುದು. ರನ್ನನು "ಅಜಿತಪುರಾಣ"ದಲ್ಲಿ ಗಂಡನ ಮರಣಾನಂತರ ಕುಲವಧುವಾದವಳು 'ಜಿನದೀಕ್ಷಾಚರಣ' ಇಲ್ಲವೆ 'ಶುಭಚರಿತದ ಮರಣ' ಇವೆರಡರಲ್ಲಿ ಯಾವುದಾದರೂ ಒಂದನ್ನು ಆಚರಿಸಬೇಕು ಎಂದಿರುವನು. ಮಕ್ಕಳಿಲ್ಲದ ಗುಂಡಮಬ್ಬೆ ಪತಿ ನಾಗದೇವನ ಮರಣಾನಂತರ ಚಿತೆಯೇರುವಳು. ಸಂತಾನ ಹೊಂದಿದ್ದ ಅತ್ತಿಮಬ್ಬೆ ಜಿನದೀಕ್ಷೆ ಸ್ವೀಕರಿಸಿ ಕಠಿಣ ವ್ರತಾಚರಣೆಗಳನ್ನು ಪಾಲಿಸಿ ದೇಹವನ್ನು ದಂಡಿಸುವಳು. ಗಂಡನ ಮರಣಾನಂತರ ಅವನೊಡನೆ ಅಗ್ನಿಪ್ರವೇಶ ಮಾಡುವ ಸ್ತ್ರೀಯ ಬಗೆಗೆ ನಮ್ಮ ಮನಸ್ಸು

---

1. ಪಂಪನ 'ವಿಕ್ರಮಾರ್ಜುನ ವಿಜಯ'ದ ೧೦.೪೫ ಹಾಗೂ ೧೧.೧೦೫ರಲ್ಲಿ ಬರುವ ವಿವರಗಳು ಇದನ್ನೇ ಪುಷ್ಟೀಕರಿಸಿದೆ.

 

ತೀವ್ರವಾಗಿ ತುಡಿಯುತ್ತದೆ. ಏಕೆಂದರೆ "....ಸ್ತ್ರೀ ಯಾವುದೋ ನಂಬಿಕೆಗಾಗಿ, ಆದರ್ಶಕ್ಕಾಗಿ ತನ್ನನ್ನು ತಾನು ಕೊಂದುಕೊಳ್ಳುತ್ತಾಳೆ. ಇದು ಬರೀ ಆತ್ಮಹತ್ಯೆ ಯಲ್ಲ. ಹೋಲಿಕೆ ಮಾಡಿ ಹೇಳುವುದಾದರೆ, ಯುದ್ಧದಲ್ಲಿ ಸಾಯುವುದು ಸುಲಭ; ಆದರೆ, ಎಲ್ಲರ ಮುಂದೆ ತನ್ನನ್ನು ತಾನು ಕೊಂದುಕೊಳ್ಳುವುದು ಕಠಿಣ. ವೀರನಿ ಗಿಂತ ಹೆಚ್ಚಿನ ನಿಷ್ಠೆ, ಧೈರ್ಯ, ಆದರ್ಶಪ್ರಿಯತೆ, ಗಂಡೆದೆ ಆ ಹೆಣ್ಣಿನಲ್ಲಿ"2 ವ್ಯಕ್ತವಾಗಿರುತ್ತದೆ. 'ವಿಕ್ರಮಾರ್ಜುನ ವಿಜಯ'ದಲ್ಲಿ ಮಾದ್ರಿಯು ಚಿತೆಯೇರಲು ನಿಶ್ಚಯಿಸಿದಾಗ ಅವಳ ಧೈರ್ಯವನ್ನು ಮೆಚ್ಚಿ ತಪೋವನದ ಮುನಿಜನಗಳೂ ವನ ದೇವತೆಯರೂ ಹೊಗಳಿದರೆಂದು ಪಂಪನು ವರ್ಣಿಸಿದರೆ, ರನ್ನನು ಗುಂಡಮಬ್ಬೆ ಗಂಡ ನನ್ನು ಅಪ್ಪಿಕೊಂಡು ಚಿತಾಗ್ನಿಯಲ್ಲಿ ದೇಹತ್ಯಾಗ ಮಾಡಲು ಅವಳನ್ನು ಲೋಕವೆಲ್ಲ ಹೊಗಳಿತು ಎಂದಿರುವನು. ವೀರನ ಅಸಮಾನ ಸಾಹಸವನ್ನು ಗೌರವಿಸಲು, ಚಿರ ಕಾಲ ನೆನೆಯಲು ಸ್ಮಾರಕ ನಿರ್ಮಿಸಿದ ಸಮಾಜವು ಗಂಡನನ್ನು ಹಿಂಬಾಲಿಸಿ ಹೊರಟ ಹೆಣ್ಣಿನ ಸ್ಥೈರ್ಯವನ್ನು ಅವಳ ನಿಷ್ಠಾಪೂರ್ಣವಾದ ಅಚಲ ಪ್ರೇಮವನ್ನು ಚಿರಸ್ಥಾಯಿ ಗೊಳಿಸಲು ಹೊರಟಿದೆ–ಮಹಾಸತಿ ಕಲ್ಲುಗಳನ್ನು ನೆಡುವುದರ ಮೂಲಕ, ಅವಳನ್ನು ದೇವತೆಯೆಂದು ಭಾವಿಸಿ ಪೂಜಿಸುವುದರ ಮೂಲಕ. ಕರ್ನಾಟಕದಲ್ಲಿ ಹಲವು ಕಡೆ ಮಾಸ್ತ್ಯಮ್ಮನ ವಿಗ್ರಹಗಳು ಸ್ಥಾಪಿತವಾಗಿದ್ದು ಅವನ್ನು ಇಂದಿಗೂ ಜನ ಪೂಜಿಸು ತ್ತಿರುವರು.

ವೀರರಿಗೆ ಸಲ್ಲುವಂತೆ ಶೂರನೊಬ್ಬನು ಪ್ರಾಣ ತ್ಯಜಿಸಿದಾಗ, ಅವನಲ್ಲಿ ಪೂರ್ಣ ನಿಷ್ಠೆಯನ್ನಿಟ್ಟಿದ್ದ ಅವನ ಪತ್ನಿಯು ಅದನ್ನು ಕಾರ್ಯರೂಪದಲ್ಲಿ ತೋರ್ಪಡಿಸಲು ಸ್ವಸಂತೋಷದಿಂದ ಆತ್ಮಾರ್ಪಣೆ ಮಾಡ ಹೊರಡುತ್ತಿದ್ದಳು. ಆಗಲೇ ಅ ಳು ಲೋಕದ ದೃಷ್ಟಿಯಲ್ಲಿ 'ಮಹಾಸತಿ'ಯಾಗುತ್ತಿದ್ದುದು. ಮಹಾಸತಿಯಾಗ ಹೊರಟ ಹೆಣ್ಣಿಗೆ ಅಂದಿನ ಸಮಾಜ ತನ್ನೆಲ್ಲ ಆದರಾಭಿಮಾನಗಳನ್ನು ಸೂರೆಮಾಡುತ್ತಿತ್ತು, ಆತ್ಮಾರ್ಪಣೆಗೆ ಸಿದ್ಧಳಾದ ಹೆಣ್ಣಿನ ನಿರ್ಧಾರವನ್ನು ಮೆಚ್ಚಿದ ಸಮಾಜ ಅವಳನ್ನು ಸಂಭ್ರಮದ ವಾತಾವರಣದಲ್ಲಿ ಮೆರೆಯಿಸಿ ಬೀಳ್ಕೊಳ್ಳುತ್ತಿತ್ತು.

ಮಹಾಸತಿಯಾಗ ಹೊರಟ ಹೆಣ್ಣಿನ ಚಿತ್ರ ೧೦ನೇ ಶತಮಾನದ ಶಾಸನ–ಕಾವ್ಯ ಗಳಲ್ಲಿ ಕಾಣಸಿಗುತ್ತದೆ. ವಚನಕಾರರೂ ಮಾಸ್ತಿಯ ಬಗೆಗೆ ಅಲ್ಪ ಸ್ವಲ್ಪ ವಿವರ ಗಳನ್ನು ನೀಡಿರುವರು. ಮಹಾದೇವಿಯಕ್ಕ ತನ್ನ 'ಯೋಗಾಂಗ ತ್ರಿವಿಧಿ'ಯಲ್ಲಿ 'ದಂಡೆಯ ಕುಣಿಕೆ ಸಡಿಲಿಸಿ' ಕೊಂಡದ ಕೆಂಡದಲ್ಲಿ ಬೀಳುವ ಮಾಸ್ತಿಯ ಚಿತ್ರ

---

2. ಡಾ॥ ಎಂ. ಚಿದಾನಂದಮೂರ್ತಿ : ವೀರಗಲ್ಲುಗಳು ಮತ್ತು ಮಾಸ್ತಿಕಲ್ಲುಗಳು, ಪು. ೪.

ಕೊಟ್ಟಿರುವಳು.3 ಮಾದಾರ ಧೂಳಯ್ಯ4 ಹಾಗೂ ಷಣ್ಮುಖಸ್ವಾಮಿಗಳು5 ಮಾಸ್ತಿಯ ಬಗೆಗೆ ಇನ್ನಷ್ಟು ಹೆಚ್ಚಿನ ವಿವರಗಳನ್ನು ನೀಡಿರುವರು. ಧೀರೆಯಾದ ಮಾಸ್ತಿಗೆ ಅವಳ ವೀರತ್ವವೆ ಅವಳ ಪ್ರಧಾನ ಗುಣ. ಇದಕ್ಕೆ ವ್ಯತಿರಿಕ್ತವಾಗಿ ಅವಳು ಹೆದರಿ ಹಿಂದೆ ಸರಿದದ್ದೇ ಆದರೆ ಧಾರುಣಿಯ ಜನವೆಲ್ಲ ಅವಳನ್ನು ಹಿಡಿದು ತಂದು ಕೊಂಡಕ್ಕೆ ಬೀಳಿಸುತ್ತಿದ್ದರು. ಅವಳು ಮುಡಿದಿರುವ ಹೂವು, ಕೈಯಲ್ಲಿ ಹಿಡಿದಿರುವ ನಿಂಬೆಹಣ್ಣು – ಇವನ್ನು ಅವಳಿಂದ ಬೇಡಿ ಪಡೆಯುವುದು ವೀರರ ಪಾಲಿಗೆ ಹೆಮ್ಮೆಯ ಸಂಗತಿ. ದೃಢಮನದ ವೀರರು ಅವುಗಳನ್ನು ಬೇಡಿದರೆ ಸಂತೋಷದಿಂದ ಕೊಡುವ ಔದಾರ್ಯ ಮಾಸ್ತಿಯದು. ಇವು ಮಾದಾರ ಧೂಳಯ್ಯ ಕೊಡುವ ಮಾಸ್ತಿ ಚಿತ್ರದ ವಿಶಿಷ್ಟಾಂಶಗಳು. ವೀರಮಾಸ್ತಿಯು ಹೂವಿನ ದಂಡೆಯಿಂದ ಅಲಂಕೃತಳಾಗಿ ಕೈಯಲ್ಲಿ ಕತ್ತಿಯನ್ನು ಹಿಡಿದುಕೊಂಡು ತಂಡೋಪತಂಡವಾಗಿ ನೆರೆದ ಜನರ ಮುಂದೆ ನಡೆದು ಬಂದು ಕಿಚ್ಚಿನ ಕೊಂಡವನ್ನು ಪ್ರವೇಶಿಸಬೇಕು. ಹಾಗೆ ಮಾಡದೆ ಹಿಮ್ಮೆಟ್ಟಿದರೆ ಅವಳ ಸತೀತ್ವಕ್ಕೆ ಅವಮಾನ. ಅವಳು ಮಾಡಿಕೊಂಡು ಬಂದ ಶೃಂಗಾರ ಶೋಭಾಯಮಾನವಲ್ಲ. ಇದು ಷಣ್ಮುಖಸ್ವಾಮಿಗಳು ಹೇಳುವ ಮಾಸ್ತಿಯ ಲಕ್ಷಣಾವಲಕ್ಷಣಗಳು.

೧೦–೧೧ ನೇ ಶತಮಾನಗಳಲ್ಲಿ ಮಾಸ್ತಿ ಒಂದು ಸಾಮಾಜಿಕ ಆಚರಣೆಯಾಗಿ ಕಂಡುಬಂದರೂ, ಒಂದು ಪದ್ಧತಿಯಾಗಿ ಸಾಮಾಜಿಕ ಮೌಲ್ಯವೆನ್ನಿಸಿಕೊಂಡಿದ್ದರೂ ೧೨ನೇ ಶತಮಾನದ ವೇಳೆಗೆ ಅದರ ಕಟ್ಟುನಿಟ್ಟು ಸಡಿಲಗೊಂಡಿರಬಹುದು. ಒಂದು ಯುಗಮಾನದ ಮೌಲ್ಯಗಳು ನಾನಾ ಕಾರಣಗಳಿಂದ ಸ್ಥಿತ್ಯಂತರಗೊಳ್ಳುವುದು ಹೊಸತೇನಲ್ಲ. ೧೨ನೇ ಶತಮಾನದಲ್ಲಿ ಶಿವಶರಣರಿಂದ ನಡೆದ ಸಾಮಾಜಿಕ ಕ್ರಾಂತಿಯ ಪರಿಣಾಮ ಬಹುವಾಗಿ ಮಹಾಸತಿ ಪದ್ಧತಿಯ ಮೇಲೂ ಆಗಿರಬಹುದು. ಶರಣರ ಸಾಮಾಜಿಕ ಕ್ರಾಂತಿ ವೈಚಾರಿಕ ನೆಲೆಗಟ್ಟಿನ ಮೇಲೆ ವಿಶೇಷವಾಗಿ ನಿಂತಿದೆ. ಅಸಮಾನತೆ ಉಚ್ಚ ನೀಚ ವರ್ಣೀಯರಲ್ಲಿ ಮಾತ್ರವಲ್ಲ, ಪುರುಷ–ಸ್ತ್ರೀಯರಲ್ಲೂ ವರ್ಗ ಭೇದವಿರುವುದನ್ನು ನಿವಾರಿಸಹೊರಟವರು ಶರಣರು. ಅಂದಿನ ಸಮಾಜದಲ್ಲಿದ್ದ ವರ್ಣವ್ಯವಸ್ಥೆಯನ್ನು ಗಮನದಲ್ಲಿಟ್ಟುಕೊಂಡು ವಿವೇಚನೆ ನಡೆಸಿದರೆ ಉಚ್ಚ ವರ್ಣೀಯರಲ್ಲಿ ಮಹಾಸತಿಯರಾದವರು ತೀರಾ ವಿರಳ. ರಣಾಂಗಣದಲ್ಲಿ ಜೀವದ ಹಂಗು

---

3. ಶಿವಶರಣೆಯರ ವಚನಗಳು (ಸಂ : ಡಾ॥ ಆರ್. ಸಿ. ಹಿರೇಮಠ) ಪು. ೧೫೩.
4. ಬಸವಾದಿ ಗಣವಚನ ಮಂಜರಿ ಭಾಗ ೧ (ಸಂ: ಡಾ॥ ಎಸ್. ಎಂ. ಹುಣಶ್ಯಾಳ) ಪು. ೪೦.
5. ಷಣ್ಮುಖಸ್ವಾಮಿಗಳ ವಚನಗಳು (ಸಂ : ಹ. ನಂ. ವಿಜಯಕುಮಾರ) ವ. ೩೪೫, ಪು. ೧೨೧.

ತೊರೆದು ಹೋರಾಡಿದವರು ಕೆಳವರ್ಗದವರೇ. ರಾಜ್ಯದ ಸೈನ್ಯ ವ್ಯವಸ್ಥೆಯಲ್ಲಿ ಯೋಧರ ಪಾಲು ಹೆಚ್ಚು. ಜೀವನ ನಿರ್ವಹಣೆಗೆ ಸೈನ್ಯ ಸೇರಿದವರಲ್ಲಿ ಕೆಳವರ್ಗ ದವರೇ ಹೆಚ್ಚು. ಹೀಗಾಗಿ ಮಹಾಸತಿಯರಾಗುತ್ತಿದ್ದವರು ಕೆಳವರ್ಗದ ಸ್ತ್ರೀಯರೇ. ಜ್ಞಾನ, ಸಾಮಾಜಿಕ ಹೊಣೆಗಾರಿಕೆಗಳೇ ಮೊದಲಾದವುಗಳಿಂದ ವಂಚಿತರಾಗಿದ್ದ, ಪುರುಷನ ದರ್ಪ ದೌರ್ಜನ್ಯಗಳಿಗೆ ಒಳಗಾಗಿದ್ದ–ಒಂದು ವಿಧದಲ್ಲಿ ಶೋಷಿತಳಾಗಿದ್ದ– ಹೆಣ್ಣಿನ ಸ್ಥಾನಮಾನಗಳನ್ನು ಮೇಲೆತ್ತಿದವರು ೧೨ನೇ ಶತಮಾನದ ಶರಣರು. ಸರಿ ಸಮಾನತೆ, ವಿಚಾರ ಸ್ವಾತಂತ್ರ್ಯಗಳು ಅವಳಿಗೂ ದಕ್ಕಿದಾಗ ಪರಂಪರೆಯಿಂದ ಬೆಳೆದು ಬಂದಿದ್ದ ನಂಬಿಕೆ, ವಿಚಾರ, ಆಚಾರಗಳ ಬಗೆಗೆ ಅವಳು ಪ್ರಾಮಾಣಿಕವಾದ ವಿವೇಚನೆ ನಡೆಸಲು ಸಾಧ್ಯವಾಯಿತು. ವಚನಕಾರ್ತಿಯರ ನೈಸರ್ಗಿಕ ಪ್ರತಿಭೆ ಅವರ ಸ್ವಾನುಭವಪೂರ್ಣವಾದ ವಿಚಾರಗಳಲ್ಲಿ ಹರಳುಗೊಂಡಿರುವುದನ್ನು ನಾವಿಲ್ಲಿ ಗಮನಿಸಬಹುದು. ಕೆಳವರ್ಗದ ಜನ ಹನ್ನೆರಡನೇ ಶತಮಾನದ ಸಾಮಾಜಿಕ ಕ್ರಾಂತಿಯ ಪರಿಣಾಮವಾಗಿ ಜೀವನದಲ್ಲಿ ಹೊಸ ಉತ್ಸಾಹವನ್ನು ಮೈದುಂಬಿಸಿಕೊಂಡರು. ಅವರ ಕೊರಳಿಗೆ ಜೀವ ಬಂದಿತು. ತಮ್ಮ ಸುತ್ತಮುತ್ತ, ತಿದ್ದಿ ತೀಡಿದ ಕಣ್ಣಿನಿಂದ ನೋಡಿದರು. ತಮ್ಮ ವಿಚಾರ ವಿವೇಚನೆಯ ಕನ್ನಡಿಯಿಂದ ತಮ್ಮನ್ನು ತಾವೇ ತಿದ್ದಿ ಕೊಂಡರು, ತಮ್ಮ ನೆರೆಹೊರೆಯವರನ್ನೂ ತಿದ್ದುವ ಪ್ರಯತ್ನ ನಡೆಸಿದರು. ಬಹುಶಃ ಇದರ ಪರಿಣಾಮ ಸ್ವಲ್ಪವಾದರೂ ಮಾಸ್ತಿ ಪದ್ಧತಿಯ ಆಚರಣೆಯ ಮೇಲೆ – ಮಾನ ಸಿಕ ನೆಲೆಯಲ್ಲಿ – ಆಗಿರಬಹುದು.

ವಚನಕಾರರು ಎಂದೂ ಆತ್ಮಹತ್ಯೆಯನ್ನು ಬೆಂಬಲಿಸಿದವರಲ್ಲ. ಅದು ಅವರ ಪ್ರಕಾರ ಅತ್ಯಂತ ಹೇಯವಾದುದು. ಸಕಲ ಜೀವಾಳಿಗೆ ಲೇಸನೇ ಬಯಸ ಹೊರಟ ಅವರು ಜೀವಹಾನಿ ಮಹಾಪಾಪದ ಕೆಲಸವೆಂದು ಬಗೆದಿದ್ದರು. ಮಹಾಸತಿ ಒಂದು ಸಂಪ್ರದಾಯವಾಗಿ, ಸಾಮಾಜಿಕ ಆಚರಣೆಯಾಗಿ ಬೇರುಬಿಟ್ಟಿದ್ದಾಗ ಅದು ಅರ್ಥ ವಿಹೀನವೂ, ಹೇಯವೂ, ಅಮಾನವೀಯವಾದುದೂ ಎಂದು ಭಾವಿಸಿ ಖಂಡಿಸಿದರು. ವಚನಕಾರರು ಮಹಾಸತಿ ಆಚರಣೆಯನ್ನು ತಮ್ಮ ವಚನಗಳಲ್ಲಿ ಉಲ್ಲೇಖಿಸಿದ ಮಾತ್ರಕ್ಕೆ ಅವರು ಅದನ್ನು ಅನುಮೋದಿಸಿದರೆಂಬ ತೀರ್ಮಾನಕ್ಕೆ ಬರುವುದು ಸರಿಯಲ್ಲ. ಈ ಆಚರಣೆಯಲ್ಲಿ ವಿಶ್ವಾಸವಿಲ್ಲದ ಮಹಾದೇವಿಯಕ್ಕ ಮಹಾಸತಿ ಆಗ ಹೊರಟ ಹೆಣ್ಣನ್ನು ತಿರಸ್ಕಾರ ರೂಪದಲ್ಲಿ 'ಲಂಡಸ್ತ್ರೀ' ಎಂದು ಕರೆದಿರುವಳು. ಷಣ್ಮುಖ ಸ್ವಾಮಿಗಳೂ 'ಪುಂಡ' ವೀರಮಾಸ್ತಿ ಎಂದು ಕರೆದಿರುವರು, ಮಹಾದೇವಿಯಕ್ಕ, ಮಾದಾರ ಧೂಳಯ್ಯ, ಷಣ್ಮುಖಸ್ವಾಮಿ–ಇವರುಗಳು ತಮ್ಮ ವಚನಗಳಲ್ಲಿ ಹೇಳಿರು ವುದು ಸಾಮಾಜಿಕ ಆಚರಣೆಯೊಂದನ್ನು ಅಷ್ಟೆ. ಹಾಗೆ ಅವರು ಅದನ್ನು ಹೇಳುವಲ್ಲಿ ಆ ಆಚರಣೆಯಲ್ಲಿನ ನಿರರ್ಥಕತೆಯನ್ನು ಧ್ವನಿಸಿರುವರು. ಮಾದಾರ ಧೂಳಯ್ಯ ಓರ್ವ ಕೆಳವರ್ಗದ ಹನ್ನೆರಡನೇ ಶತಮಾನದ ವಚನಕಾರ. ಅವನ ವಚನದ ಪೂರ್ವಾರ್ಧ

ಮಾಸ್ತಿ Ritual ಬಗೆಗೆ ಪ್ರಸ್ತಾಪಿಸಿದರೂ ವಚನದ ಉತ್ತರಾರ್ಧ ಅದರ ಪರವಾಗಿಲ್ಲ. ಅದನ್ನು ವೈಭವೀಕರಿಸು (glorify)ತ್ತಿಲ್ಲ. ವೀರರು ಬೇಡಿದರೆ ಅವರ ಮೇಲೆ ಕರುಣೆಯಿಟ್ಟು ತಾನು ಮುಡಿದ ಹೂವು, ಹಿಡಿದ ನಿಂಬೆಹಣ್ಣು ಕೊಡುವ ಮಹಾಸತಿ ದೇವತೆಯೇನಲ್ಲ, ಸಾಮಾನ್ಯಳೆ. ಆಕೆ ಕಿಚ್ಚಿಗೆ ಬಿದ್ದು ದಹನವಾದಳು ಅಷ್ಟೆ. ಸ್ವರ್ಗಕ್ಕೆ ಪತಿಯೊಡನೆ ಅವಳು ಹೋಗಲಿಲ್ಲ. (ಪತಿಯೊಡನೆ ಸಹಗಮನ ಮಾಡುವುದರ ಮೂಲಕ ಸ್ವರ್ಗಕ್ಕೆ ಹೋಗಬಹುದೆಂಬ ಕಲ್ಪನೆಯ ನಿರಾಕರಣೆಯೂ ಇರುವಂತಿದೆ.) ಆರಾಧ್ಯ ದೇವತೆಯಾಗಿ ಭಕ್ತರು ಬೇಡಿದ್ದನ್ನು ಕೊಡಹೊರಟ ಮಹಾಸತಿ ಶಾಶ್ವತಳೆ ? ಅಲ್ಲ, ಬೆಂಕಿಯಲ್ಲಿ ಅವಳ ದೇಹ ಸುಟ್ಟು ಬೂದಿಯಾಯಿತು. ಶಾಶ್ವತನು ಕಾಮಧೂಮ ಧೂಳೇಶ್ವರಲಿಂಗನು. ಬೇಡಿದ್ದನ್ನು ನೀಡಬಲ್ಲ ಕೃಪಾಮೂರುತಿ ಪರಮಾತ್ಮನಾದ ಕಾಮಧೂಮ ಧೂಳೇಶ್ವರಲಿಂಗನು. ತನು ಶಾಶ್ವತವಲ್ಲ, ಆತ್ಮನಲ್ಲಿ ಜ್ಯೋತಿರೂಪನಾದ ಕಾಮಧೂಮ ಧೂಳೇಶ್ವರಲಿಂಗನು ಶಾಶ್ವತನು. ನಮ್ಮನ್ನು ಆವರಿಸಿರುವ ಅಜ್ಞಾನದ ತೆರೆ ಸರಿದಾಗ ಸುಜ್ಞಾನದ ಬೆಳಕಿನಲ್ಲಿ ನಾವು ನಮ್ಮ ಆತ್ಮನಲ್ಲಿ ತೊಳಗಿ ಬೆಳಗುವ ಪರಬ್ರಹ್ಮಸ್ವರೂಪಿಯನ್ನು ಕಾಣಬಹುದು. ಸತ್ತು ಸ್ವರ್ಗ ಸೇರುತ್ತೇನೆ ಎಂಬುದಕಿಂತ ಬದುಕಿ ನಮ್ಮಲ್ಲಿಯೇ ಅಂತರ್ಗತನಾಗಿರುವ ಪರಮಾತ್ಮನ ಸಾಕ್ಷಾತ್ಕಾರ ಪಡೆಯುತ್ತೇನೆ ಎಂಬ ನಿಲುವು ಮಾದಾರ ಧೂಳಯ್ಯನದು. ಹೀಗಾಗಿ, ಕಾಣದ ಸ್ವರ್ಗಕ್ಕಿಂತ ಕಾಣುವ ಬದುಕು ಮುಖ್ಯವೆನಿಸುತ್ತದೆ ಅವನಿಗೆ. ಪರದಲ್ಲಿ ಪಡೆವ ಸುಖವನ್ನು ಇಹದಲ್ಲೇ ಶುಚಿಜೀವನ ನಡೆಸುತ್ತಾ ಕಾಣಬಹುದೆನ್ನುವ ಅವನ ವಾಸ್ತವವಾದ ನಿಲುವು ಮಹೋನ್ನತವಾದುದು. ಸ್ವರ್ಗವೇ ಹೆಚ್ಚೆಂದು ಕಿಚ್ಚಿಗೆ ಹಾರ ಹೊರಟ ಮಾಸ್ತಿಯ ನಿಲುವನ್ನೂ, ಮಾಸ್ತಿಯನ್ನು ಆರಾಧ್ಯ ಮೂರ್ತಿಯಾಗಿ ಭಾವಿಸಿ ಅವಳ ಕೃಪೆ ಯಾಚಿಸಿದ ಭಕ್ತರ ನಿಲುವನ್ನೂ ವ್ಯಂಗ್ಯದ ನೆಲೆಯಲ್ಲಿ ಟೀಕಿಸುವ ವಚನಕಾರನ ಧೋರಣೆ ಇಲ್ಲಿ ಅರ್ಥಪೂರ್ಣವಾಗಿದೆ.

ಷಣ್ಮುಖಸ್ವಾಮಿಗಳ ವಚನವೂ ಮಾಸ್ತಿ ಪದ್ಧತಿಯನ್ನು ನಿರಾಕರಿಸುವ ಧೋರಣೆಯನ್ನು ಹೊಂದಿದೆ. ವಚನದ ಪೂರ್ವಾರ್ಧದಲ್ಲಿ ಮಹಾಸತಿಯಾಗುವವಳಿಗಿರಬೇಕಾದ ದೃಢನಿಲುವಿನ ಬಗೆಗೆ ಪ್ರಸ್ತಾಪಿಸಲಾಗಿದೆ. ನಿಷ್ಠೆ ಅಚಲವಾದಾಗ 'ವೀರಮಾಸ್ತಿ'ಯಾಗುವಳು. ನಿಷ್ಠೆಯಲ್ಲಿ ಗಟ್ಟಿತನವಿಲ್ಲದಿದ್ದರೆ ಕೆಂಡಕ್ಕೆ ಬೀಳುವೆನೆಂದು ಹೊರಟ ಅವಳಿಗೇ ಅವಮಾನ, ಅವಳು ಮಾಡಿಕೊಂಡು ಬಂದ ಶೃಂಗಾರಕ್ಕೇ ಅವಮಾನ. ವೀರಮಾಸ್ತಿಯ ನಿಷ್ಠೆ ಅವಳ ಪತಿಯಲ್ಲಿ ಹೇಗೋ ಹಾಗೆ ಭಕ್ತನ ನಿಷ್ಠೆ ಲಿಂಗದಲ್ಲಿ ಎರಕಗೊಳ್ಳಬೇಕು ಎಂಬ ತಾತ್ವಿಕ ನಿಲುವಿಗೆ ವಚನದ ಉತ್ತರಾರ್ಧ ಹೊರಳುತ್ತದೆ. ಭಕ್ತನಾದವನಲ್ಲಿ ಸತಿ-ಪತಿ ಭಾವ ನೆಲೆಗೊಳ್ಳಬೇಕು. ತಾನು ಸತಿ, ಲಿಂಗ ಪತಿ ಎಂಬ ನಿಲುವಿನಲ್ಲಿ ಅನುಸಂಧಾನಕ್ರಿಯೆ ನಡೆಯಬೇಕು. ಶರಣ ಸತಿ, ಲಿಂಗ ಪತಿ ಈ ಭಾವದಿಂದಲೇ, ಈ ಬಗೆಯ ಕೈಂಕರ್ಯದಿಂದಲೇ ಪರಮಾತ್ಮನ

ಸಾಕ್ಷಾತ್ಕಾರ. ಇಲ್ಲಿ ನಿಷ್ಠೆ ಪ್ರಧಾನ. ಭಕ್ತನಲ್ಲಿ ಈ ಬಗೆಯ ನಿಷ್ಠೆ ಓಸರಿಸಿದರೆ ಅವನ ಪತನಕ್ಕೆ ತುದಿಮೊದಲಿಲ್ಲ. ಮಹಾಸತಿಯಾದವಳು ತನ್ನ ಪತಿನಿಷ್ಠೆಯನ್ನು ಪ್ರಕಟಸಲು, ಗಂಡನನ್ನು ಸ್ವರ್ಗದಲ್ಲಿ ಸೇರಲು ಕೊಂಡಕ್ಕೆ ಬಿದ್ದಳು. ತನ್ನನ್ನು ತಾನೇ ಕೊಂದುಕೊಂಡಳು. ಶರಣನ ಪಾಲಿಗೆ ಆತ್ಮಹತ್ಯೆ ಪಾಪಕಾರ್ಯ. ಶರಣರಿಗೆ ಇರಬೇಕಾದ ಗುಣ ಸತಿ–ಪತಿಭಾವ. ಇದನ್ನು ಬದುಕಿನಲ್ಲಿ ಅಳವಡಿಸಿಕೊಂಡು, ನಿಷ್ಠಾಪೂರ್ಣನಾಗಿ ಆಚರಿಸಿದರೆ ಬದುಕಿನ ಪರಮ ಸುಖ ಇಹದಲ್ಲೇ ದೊರೆಯುತ್ತದೆ. ಶರಣ ಅದಕ್ಕಾಗಿ ಪ್ರಾಣಬಿಡಬೇಕಾಗಿಲ್ಲ. ಷಣ್ಮುಖಸ್ವಾಮಿಗಳು ಹದಿನೆಂಟನೇ ಶತಮಾನದ ಆದಿಭಾಗದಲ್ಲಿದ್ದ ವಚನಕಾರ, ಹಿರಿಯ ಅನುಭಾವಿ. ಮಾಸ್ತಿ ಪದ್ಧತಿಯ ಬಗೆಗಿನ ನಿರಾಕರಣೆ ಹನ್ನೆರಡನೇ ಶತಮಾನದ ವಚನಕಾರರಲ್ಲಿ ಕಂಡುಬಂದಿರುವುದು, ಧೋರಣೆಯಲ್ಲಿ ಬದಲಾಗದೆ ಷಣ್ಮುಖಸ್ವಾಮಿಗಳಲ್ಲಿಯೂ ಮುಂದುವರೆದಿದೆ. ವಚನಕಾರರು ಮಾಸ್ತಿ ಪದ್ಧತಿಯನ್ನು ಖಂಡಿಸಿದರೂ ಅದು ಆಚರಣೆಯಿಂದ ತಪ್ಪಿಹೋಗಲಿಲ್ಲ. ವಚನಕಾರರು ಆ ಪದ್ಧತಿಯನ್ನು ಮಾನವೀಯ ದೃಷ್ಟಿಯಿಂದ ಖಂಡಿಸಿದರು. ಆಚರಣೆಯ ಹೆಸರಿನಲ್ಲಿ ಕರುಣೆ ಮರೆತು ಜೀವವನ್ನು ಅಗ್ನಿಗೆ ಆಹುತಿ ಕೊಡಲು ಸಮ್ಮತಿಸಿದ ಸಮಾಜದ ಕುರುಡುನಂಬಿಕೆಯನ್ನು, ಗಂಡ ಸಾವನ್ನಪ್ಪಿದನೆಂದು ಅವನ ಬೆನ್ನ ಹಿಂದೆಯೇ ಸಾಯಹೊರಟ ಹೆಣ್ಣಿನ ಅರ್ಥವಿಲ್ಲದ ನಂಬುಗೆಯನ್ನು ಅವರು ವೈಚಾರಿಕ ನೆಲೆಯಲ್ಲಿ ಪ್ರಶ್ನಿಸಿದರು. ಸತ್ತು ಸ್ವರ್ಗ ಕಾಣುವುದಕ್ಕಿಂತ ಬದುಕಿನಲ್ಲಿಯೇ ಸುಖವನ್ನರಸುವ ಹಾದಿ ತೋರಿದರು.

ಶರಣರ ಉದ್ದೇಶ ಘನವಾಗಿದ್ದರೂ ಮಾಸ್ತಿ ಪದ್ಧತಿಯನ್ನು ಅವರಿಂದ ತಪ್ಪಿಸಲಾಗಲಿಲ್ಲ. ಉತ್ತರದಿಂದ ಮುಹಮ್ಮದೀಯರ ಧಾಳಿ ದಕ್ಷಿಣದ ಕಡೆಗೆ ಬಂದಾಗ, ಮಹಮ್ಮದೀಯರ ಪಾಶವೀಕೃತ್ಯಕ್ಕೆ ಬಲಿಯಾಗುವುದರ ಬದಲು ಗಂಡನ ಬೆನ್ನ ಹಿಂದೆಯೇ ಸಾಗುವುದು ಮೇಲು ಎಂಬ ನಿಲುವನ್ನು ಸ್ತ್ರೀಯರು ತಾಳಿದರು. ಇದರ ಪರಿಣಾಮವಾಗಿ 'ಮಹಾಸತಿ' ಪದ್ಧತಿ ಮತ್ತಷ್ಟು ವ್ಯಾಪಕವಾಗಲು, ಅದಕ್ಕೆ ಸಾಮಾಜಿಕವಾದ ಮನ್ನಣೆ ಸಿಗಲು ಅವಕಾಶವಾಯಿತು.*



*ಈ ಲೇಖನ ಬರೆಯುವ ಸಂದರ್ಭದಲ್ಲಿ ನನ್ನ ಆಲೋಚನಾ ವಿಧಾನವನ್ನು ಬೆಂಬಲಿಸಿ, ನನ್ನಲ್ಲಿ ಮೂಡಿದ ಹಲವು ಸಮಸ್ಯೆಗಳಿಗೆ ಪರಿಹಾರ ಸೂಚಿಸಿ ನೆರವು ನೀಡಿದವರು ಡಾ॥ ಎಂ. ಚಿದಾನಂದಮೂರ್ತಿ ಹಾಗೂ ಶ್ರೀ ಬಸವರಾಜ ಕಲ್ಗುಡಿ. ಇವರಿಗೆ ನನ್ನ ಹೃತ್ಪೂರ್ವಕ ನೆನಕೆಗಳು.



## ಡಾ॥ ಎಸ್. ವಿದ್ಯಾಶಂಕರ

1941ರ ಜೂನ್ ಹದಿನಾರರಂದು ಕೊಳ್ಳೇಗಾಲ ತಾಲ್ಲೂಕಿನ ಮಧುವನಹಳ್ಳಿಯಲ್ಲಿ ಜನಿಸಿದ ಡಾ॥ ಎಸ್. ವಿದ್ಯಾಶಂಕರ ಅವರು 1964ರಲ್ಲಿ ಬಿ.ಎ. ಪದವಿಯನ್ನೂ 1966ರಲ್ಲಿ ಎಂ.ಎ. ಪದವಿಯನ್ನೂ 1972ರಲ್ಲಿ ಪಿಎಚ್.ಡಿ ಪದವಿಯನ್ನೂ ಪಡೆದರು. 1966ರಲ್ಲಿ ಬೆಂಗಳೂರಿನ ನ್ಯಾಷನಲ್ ಕಾಲೇಜಿನ ಅಧ್ಯಾಪಕರಾಗಿ ನೇಮಕಗೊಂಡ ಅವರು ಒಂದು ವರ್ಷ ಅಲ್ಲಿ ಸೇವೆ ಸಲ್ಲಿಸಿ ನಂತರ 1967ರಲ್ಲಿ ಸ್ನಾತಕೋತ್ತರ ಸಂಶೋಧಕ ಸಹಾಯಕರಾಗಿ ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ವಿಭಾಗವನ್ನು ಸೇರಿ, ಈಗ ಅಲ್ಲೇ ಕನ್ನಡ ಸಹ ಪ್ರಾಧ್ಯಾಪಕರಾಗಿ ಕೆಲಸ ಮಾಡುತ್ತಿರುವರು. ಹಳಗನ್ನಡ ಸಾಹಿತ್ಯ, ವಚನ ಸಾಹಿತ್ಯ, ಗ್ರಂಥ ಸಂಪಾದನೆ, ಕರ್ನಾಟಕ ಸಾಂಸ್ಕೃತಿಕ ಚರಿತ್ರೆ, ತಮಿಳು ನಾಡಿನ ನಾಯನ್ಮಾರರು–ಇವೇ ಮೊದಲಾದವು ಅವರ ಆಸಕ್ತಿಯ ವಿಷಯಗಳಾಗಿವೆ. ಸುಮಾರು ಅರವತ್ತಕ್ಕೆ ಮೇಲ್ಪಟ್ಟ ಸಂಪ್ರಬಂಧಗಳನ್ನು ಬರೆದಿರುವರು.

ದೀಪದ ಕಲಿಯರ ಕಾವ್ಯ, ಇಮ್ಮಡಿ ಮುರಿಗಾ ಗುರುಸಿದ್ಧ ಶಿವಯೋಗಿಯ ಕೃತಿಗಳು, ಅನಂತನಾಥ ಪುರಾಣ ಸಂಗ್ರಹ, ಶಾಂತಿ ಪುರಾಣ ಸಂಗ್ರಹ–ಇವು ಅವರ ಸ್ವತಂತ್ರ ಸಂಪಾದಿತ ಕೃತಿಗಳು. ವಾಕ್ಯ ಮಾಣಿಕ್ಯ ಕೋಶ, ರಾಘವಾಂಕ ಚತುರ್ಮುಖ, ಧರ್ಮ ಸಂಪಾದನೆ, ಗುರುಭಕ್ತನ ಕಥೆ, ಕೆಂಭಾವಿ ಭೋಗಣ್ಣನ ಸಾಂಗತ್ಯ, ಅಂಬಿಗರ ಚೌಡಯ್ಯನ ವಚನಗಳು–ಇವು ಅವರು ಬೇರೆಯವರೊಡನೆ ಸೇರಿ ಸಂಪಾದಿಸಿರುವ ಕೃತಿಗಳು. ಇತರರೊಡನೆ ಸೇರಿ ಡಾ॥ ಜಿ. ಎಸ್. ಎಸ್. ಅಭಿನಂದನ ಗ್ರಂಥವಾದ 'ಸ್ನೇಹ ಕಾರ್ತಿಕ'ವನ್ನೂ ದಿ॥ ಟಿ. ಎನ್. ಮಹದೇವಯ್ಯನವರ ಸ್ಮರಣ ಗ್ರಂಥವಾದ 'ಗುಪ್ತ ಗಂಗಾ'ವನ್ನೂ ಹೊರತಂದಿರುವರು. ಮಕ್ಕಳಿಗಾಗಿ 'ಕಲ್ಬುರ್ಗಿಯ ಶರಣ ಬಸವೇಶ್ವರ' ಎಂಬ ಪುಟ್ಟ ಪುಸ್ತಕ ಬರೆದಿರುವರು. ಸಾಮಾನ್ಯರಿಗೆಂದು 'ಸರ್ವಜ್ಞನ ವಚನಗಳು' ಎಂಬ ವಚನ ಸಂಗ್ರಹವನ್ನು ಹೊರತಂದಿರುವರು. 'ಪ್ರಭುಲಿಂಗ ಲೀಲೆ' ಹಾಗೂ 'ಉದ್ಭಟ ಕಾವ್ಯ'ಗಳ ಗದ್ಯಾನುವಾದವನ್ನು ಮಾಡಿರುವರು. 'ಚೇರಮನ ಕಥೆಯ ತೌಲನಿಕ ಅಧ್ಯಯನ' ಹಾಗೂ 'ವಚನ ಪರುಷ' ಅವರ ಇತ್ತೀಚಿನ ಕೃತಿಗಳು. [illegible] 'ವೀರಶೈವ ಪುರಾಣಗಳು : ಒಂದು ಅಧ್ಯಯನ' ಹಾಗೂ 'ಕನ್ನಡದಲ್ಲಿ ಪ್ರವಾಸ ಸಾಹಿತ್ಯ' ಸದ್ಯದಲ್ಲೇ ಪ್ರಕಟವಾಗಲಿರುವ ಕೃತಿಗಳು.